# ವಿಕಾಸ

(ವಿದ್ಯಾರ್ಥಿ-ಕಾವ್ಯ-ಸಮೀಕ್ಷೆ)

ಗೌರ್ನಮೆಂಟ್ ಇಂಟರ್‌ಮೀಡಿಯಟ್ ಕಾಲೇಜಿನ
ಕನ್ನಡ ವಿಭಾಗದ ವಾರ್ಷಿಕ ಪ್ರಕಟನೆ



'ಕಾವ್ಯಾಂಜಲಿ', 'ಕರ್ಮಯೋಗಿ', 'ಮಧ್ಯಮ ವ್ಯಾಯೋಗ',
'ಚಂದವಳ್ಳಿಯ ತೋಟ'
ಈ ಪಠ್ಯಗ್ರಂಥಗಳ ಮೇಲಿನ ಲೇಖನಮಾಲೆ



ಲೇಖಕರು:
ವಿದ್ಯಾರ್ಥಿ ವೃಂದ

ಸಂಪಾದಕ:
...ಿ. ಸೀತಾರಾಮಯ್ಯ, ಎಂ. ಎ.
(ಕನ್ನಡ ಅಧ್ಯಾಪಕ)

ಮಾರಾಟಗಾರರು:
... ಇಂಟರ್‌ಮೀಡಿಯಟ್ ಕಾಲೇಜ್
...ಆಪರೇಟಿವ್ ಸೊಸೈಟಿ ಲಿಮಿಟೆಡ್
ಬೆಂಗಳೂರು.

[ಬೆಲೆ: ಒಂದು ರೂಪಾಯಿ.

# ವಿಕಾಸ

(ವಿದ್ಯಾರ್ಥಿ-ಕಾವ್ಯ-ಸಮೀಕ್ಷೆ)

ಗೌರ್ನಮೆಂಟ್ ಇಂಟರ್‌ಮೀಡಿಯಟ್ ಕಾಲೇಜಿನ
ಕನ್ನಡ ವಿಭಾಗದ ವಾರ್ಷಿಕ ಪ್ರಕಟನೆ



'ಕಾವ್ಯಾಂಜಲಿ', 'ಕರ್ಮಯೋಗಿ', 'ಮಧ್ಯಮ ವ್ಯಾಯೋಗ',
'ಚಂದವಳ್ಳಿಯ ತೋಟ'
ಈ ಪಠ್ಯಗ್ರಂಥಗಳ ಮೇಲಿನ ಲೇಖನಮಾಲೆ



ಲೇಖಕರು:
ವಿದ್ಯಾರ್ಥಿ ವೃಂದ

ಸಂಪಾದಕ:
ಎಂ. ವಿ. ಸೀತಾರಾಮಯ್ಯ, ಎಂ. ಎ.
(ಕನ್ನಡ ಅಧ್ಯಾಪಕ)

ಮಾರಾಟಗಾರರು:
ಗೌರ್ನಮೆಂಟ್ ಇಂಟರ್‌ಮೀಡಿಯಟ್ ಕಾಲೆಜ್
ಕೋ-ಆಪರೇಟಿವ್ ಸೊಸೈಟಿ ಲಿಮಿಟೆಡ್
ಬೆಂಗಳೂರು.

[ಬೆಲೆ: ಒಂದು ರೂಪಾಯಿ.

ಸಂಪಾದಕ ಮಂಡಲಿ :

ಶ್ರೀ ಕೆ. ವೆಂಕಟರಾಮಪ್ಪ, ಎಂ. ಎ. } ಅಧ್ಯಕ್ಷರು.
ಶ್ರೀ ಡಿ. ವಿ. ಶೇಷಗಿರಿರಾವ್, ಬಿ.ಎ. }

ಶ್ರೀ ಎಂ. ವಿ. ಸೀತಾರಾಮಯ್ಯ, ಎಂ. ಎ. (ಸಂಪಾದಕ)

ಶ್ರೀ ಕೆ. ವಿ. ಲಿಂಗಪ್ಪ, ಎಂ. ಎ.

ಶ್ರೀ ಎಂ. ಎಸ್. ರಾಮಲಿಂಗಪ್ಪ, ಎಂ. ಎ.





ಮುದ್ರಕರು :
ಶಾರದಾ ಪ್ರಕಟನಾಲಯ
ಅರಳೇಪೇಟೆ :: ಬೆಂಗಳೂರು ೨.

# ಮೊದಲ ಮಾತು

ಪ್ರೀ-ಯೂನಿವರ್ಸಿಟಿ ತರಗತಿಯ ಕನ್ನಡ ಪಾಠಕ್ರಮದಲ್ಲಿ ಲೇಖನಾಭ್ಯಾಸಕ್ಕೂ ಒಂದು ಅವಕಾಶವನ್ನು ಕಲ್ಪಿಸಿರುವುದು ಆವಶ್ಯಕವೂ ಅಭಿನಂದನೀಯವೂ ಆಗಿದೆ. ತರಗತಿಯ ಒಳಗೆ ಬಹುಮಟ್ಟಿಗೆ ಎಲ್ಲ ವಿದ್ಯಾರ್ಥಿಗಳೂ ಬಲಾತ್ಕಾರಕ್ಕೆ ಕಟ್ಟುಬಿದ್ದು ಕಾಟಾಚಾರಕ್ಕೆ ಲೇಖನ ಬರೆದುಕೊಡುತ್ತಾರೆ. ಇದು ಎಲ್ಲ ಉಪಾಧ್ಯಾಯರ ಅನುಭವದ ಮಾತು. ತರಗತಿಯ ಲೇಖನ ಕಾರ್ಯಕ್ಕೆ ಕಟ್ಟಿದ ಬೆಲೆ ವಾರ್ಷಿಕಪರೀಕ್ಷೆಯ ಫಲಿತಾಂಶಕ್ಕೂ ಅನ್ವಯಿಸುವುದಾಗಿದ್ದರೆ ಆ ಮಾತು ಬೇರೆ. ಹೀಗಿರುವುದರಿಂದ, ಸ್ವತಂತ್ರ ವಾತಾವರಣದಲ್ಲಿ ವಿದ್ಯಾರ್ಥಿಗಳ ಲೇಖನ ಶಕ್ತಿಯನ್ನು 'ವಿಕಾಸ' ಗೊಳಿಸಬೇಕೆಂಬ ಉದ್ದೇಶದಿಂದ, ಕಾಲೇಜಿನ ಕನ್ನಡ ವಿಭಾಗದ ಮೂಲಕ ವಿದ್ಯಾರ್ಥಿಗಳ ಲೇಖನ ಸಂಪುಟವೊಂದನ್ನು ಪ್ರಕಟಿಸಬೇಕೆಂಬ ಆಲೋಚನೆ ಮೂಡಿತು. ಈ ಆಲೋಚನೆಯನ್ನು ಕನ್ನಡ ವಿಭಾಗದ ಪ್ರಧಾನರಾಗಿದ್ದ ಶ್ರೀ. ಕೆ. ವೆಂಕಟರಾಮಪ್ಪನವರ ಮುಂದಿಟ್ಟಾಗ ಅವರು ಇದನ್ನು ಅನುಮೋದಿಸಿ, ಸಕಲ ಸಹಾಯ ಸಂಪತ್ತಿಗಳನ್ನೂ ನೀಡುವುದಾಗಿ ಭರವಸೆಯಿತ್ತು, ಕಾರ್ಯದ ಹೊಣೆಯನ್ನು ನನಗೆ ವಹಿಸಿಕೊಟ್ಟರು. ಅದನ್ನು ಗೌರವವೆಂದೇ ಭಾವಿಸಿ ನಾನು ಒಪ್ಪಿಕೊಂಡೆ.

ಸಹಜವಾಗಿಯೆ, ವಿದ್ಯಾರ್ಥಿಗಳಿಂದ ಕತೆ ಕವನ ಹರಟೆ ಪ್ರಬಂಧ ಮುಂತಾದ ಬರಹಗಳನ್ನು ಸಂಗ್ರಹಿಸುವ ಯೋಚನೆ ಮೊದಲು ಬಂತು. ಕೋರಿದ ಕೂಡಲೆ ವಿದ್ಯಾರ್ಥಿಗಳಿಂದ ಅನೇಕಾನೇಕ ಕತೆ ಕವನ ಮುಂತಾದವು ಬರೆದು ಬರುವುದರಲ್ಲಿ ಸಂದೇಹವೇನೂ ಕಾಣಲಿಲ್ಲ. ಆ ಬಗೆಯ ಬರವಣಿಗೆಯಿಂದ ವಿದ್ಯಾರ್ಥಿಗಳಲ್ಲಿ ಅಡಗಿರುವ ಲೇಖನ ಕಲೆ ವಿಕಾಸಗೊಳ್ಳುವುದರಲ್ಲಿಯೂ ಸಂಶಯವಿಲ್ಲ. ಆದರೆ, ವಿದ್ಯಾರ್ಥಿಗಳ ಕನ್ನಡ ಭಾಷಾ ಜ್ಞಾನವನ್ನು ಬೆಳಸುವಂತಹ ; ಉತ್ತಮ ಗದ್ಯಶೈಲಿಯನ್ನು ರೂಪಿಸುವಂತಹ ; ಸಾಧ್ಯವಾದರೆ, 'ಪೇಟೆಯ ನೋಟ್ಸು'ಗಳನ್ನು ನೆಮ್ಮದೆ ಸ್ವತಂತ್ರವಾಗಿ ಕಾವ್ಯಸಮೀಕ್ಷೆಯನ್ನು ಮಾಡುವ ಸಾಮರ್ಥ್ಯವನ್ನು ಕುದುರಿಸುವಂತಹ ಬರವಣಿಗೆಯನ್ನು ಪ್ರಕಾಶಕ್ಕೆ ತರಬೇಕೆಂಬುದು ನಮ್ಮ ಆಶಯವಾಗಿತ್ತು. ಆದ್ದರಿಂದ, ಮೊದಲ ಹೆಜ್ಜೆಯಾಗಿ, ಈ

ವರ್ಷದ ಪಠ್ಯಗ್ರಂಥಗಳ ಮೇಲೆಯೇ ವ್ಯಾಸಂಗ ವಿಷಯಗಳನ್ನು ಗೊತ್ತುಮಾಡಿ ಅವುಗಳ ಮೇಲೆ ಲೇಖನಗಳನ್ನು ಬರೆಯಿಸಿದರೆ, ಬರೆದವರಿಗೆಲ್ಲ ಲೇಖನಾಭ್ಯಾಸದ ಅವಕಾಶವು ದೊರೆತು, ಪ್ರಕಟನೆಗೆಂದು ಆಯ್ದ ಉತ್ತಮ ಲೇಖನಗಳನ್ನು ಬರೆದ ವಿದ್ಯಾರ್ಥಿಗಳಿಗೆ ಉತ್ತೇಜನ ಲಭಿಸಿ, ಇತರ ವಿದ್ಯಾರ್ಥಿಗಳಿಗೂ ಪ್ರಯೋಜನವಾಗುವುದೆಂದು ನಿರೀಕ್ಷಿಸಲಾಯಿತು. ನಮ್ಮ ನಿರೀಕ್ಷೆ ಬಹುಮಟ್ಟಿಗೆ ಫಲಕಾರಿಯಾಗಿದೆ ಎಂದು ಹೇಳಲು ಸಂತೋಷವಾಗುತ್ತದೆ.

**ವಿಕಾಸ** ಸಂಪೂರ್ಣವಾಗಿ ವಿದ್ಯಾರ್ಥಿಗಳ ಸಹಕಾರ ಪ್ರಯತ್ನಗಳ ಫಲ. ೨೭೩ ಮಂದಿ ತಲಾ ಎಂಟಾಣೆಯಂತೆ ಮುಂಗಡ ರಿಯಾಯಿತಿಯ ಚಂದಾ ಹಣ ಕೊಟ್ಟದ್ದರಿಂದ ಪ್ರಕಟನ ಕಾರ್ಯಕ್ಕೆ ತೊಡಗಲು ಸಾಧ್ಯವಾಯಿತು. ಲೇಖನಗಳು ಬಾರದಿದ್ದರೆ, ಹಣ ಬಂದೂ ಪ್ರಯೋಜನವಿಲ್ಲ. ಸುಮಾರು ೪೦ ಮಂದಿ ವಿದ್ಯಾರ್ಥಿಗಳು, ಪ್ರಕಟಿತ ವಿಷಯಗಳ ಮೇಲೆ, ಸುಮಾರು ೭೫ ಲೇಖನಗಳನ್ನು ಕಳಿಸಿಕೊಟ್ಟರು. ನಿರೀಕ್ಷಿಸಿದಷ್ಟು ಹಣ ವಿದ್ಯಾರ್ಥಿಗಳಿಂದ ಮೊದಲೇ ಸಂಗ್ರಹವಾಗದೆಹೋದದ್ದರಿಂದ, ಆಯ್ಕೆಯಾಗಿದ್ದ ಕೆಲವು ಬರಹಗಳನ್ನು ಹಿಂದಕ್ಕೆ ಉಳಿಸಿಕೊಂಡು ಸಂಪುಟದ ಪುಟಸಂಖ್ಯೆಯನ್ನು ಸ್ವಲ್ಪಮಟ್ಟಿಗೆ ಮಿತಿಗೊಳಿಸಬೇಕಾಯಿತು.

ಪ್ರಕಟವಾಗಿರುವ ಲೇಖನಗಳೆಲ್ಲವೂ ಒಂದೇ ಮಟ್ಟದಲ್ಲಿಲ್ಲ. ಎಲ್ಲ ಲೇಖನಗಳ ಮೇಲೂ ಅಷ್ಟೋ ಇಷ್ಟೋ ಸಂಪಾದಕನ ಕೈ ಆಡಿದ್ದರೂ, ವಿದ್ಯಾರ್ಥಿ-ಲೇಖಕರ ನಿರೂಪಣಕ್ರಮ ಭಾಷೆ ಶೈಲಿಗಳ ವೈಶಿಷ್ಟ್ಯಕ್ಕೆ ಭಂಗಬಾರದಂತೆ ಕೈಲಾದ ಮಟ್ಟಿಗೂ ಎಚ್ಚರಿಕೆ ವಹಿಸಲಾಗಿದೆ. ಲೇಖನಗಳಲ್ಲಿ ಉಳಿದುಕೊಂಡಿರಬಹುದಾದ ಲೋಪದೋಷಗಳಿಗೆ ಲೇಖಕರು ಎಷ್ಟರಮಟ್ಟಿಗೆ ಹೊಣೆಗಾರರೋ ಸಂಪಾದಕನೂ ಅಷ್ಟರಮಟ್ಟಿಗೇ ಹೊಣೆಗಾರನಾಗಿದ್ದಾನೆ! ಕೆಲವು ಲೇಖನಗಳ ವಿಚಾರದಲ್ಲಿಯಂತೂ ಸಂಪಾದಕನ ಕೈಗೆ ತುಂಬ ಬಿಡುವಿತ್ತು ಎಂದು ತಿಳಿಸಬೇಕಾದ್ದು ಆತನ ಸಂತೋಷದ ಕರ್ತವ್ಯ. ಪ್ರಯೋಗಾರ್ಥವಾಗಿ, ಒಂದು ಲೇಖನವನ್ನು ವರ್ಷಮಧ್ಯದ ಪರೀಕ್ಷೆಯ ಉತ್ತರ ಪುಸ್ತಕದಿಂದ ಇದ್ದುದನ್ನು ಇದ್ದಹಾಗೆಯೇ ಎತ್ತಿ ಕೊಡಲಾಗಿದೆ (ಲೇಖನ ೧೦); ಕಡೆಯ ಕೆಲವು ಲೇಖನಗಳು (೨೨–೨, ೫, ೭) ತರಗತಿಯ ಅಭ್ಯಾಸ ಪುಸ್ತಕಗಳಿಂದ ಆರಿಸಿಕೊಂಡವು. ಒಟ್ಟಿನಲ್ಲಿ, ವಿದ್ಯಾರ್ಥಿಗಳ ಲೇಖನ ಕಾರ್ಯ ಮೆಚ್ಚತಕ್ಕದ್ದಾಗಿದೆ.

ವಿದ್ಯಾರ್ಥಿಗಳಲ್ಲಿ ಒಂದು ವಿಶೇಷ ಪ್ರಾರ್ಥನೆ :

ಈ ಪ್ರಕಟನೆಯನ್ನು ಪಠ್ಯಪುಸ್ತಕಗಳ 'ನೋಟ್ಸ್' ಎಂದು ಖಂಡಿತ ಭಾವಿಸಬಾರದು. ಗೊತ್ತಾದ ವಿಷಯಗಳ ಮೇಲೆ 'ಪುರಾಣ' ಬರೆಯದೆ ಹಿತ ಮಿತವಾಗಿ ಹೇಗೆ ಪ್ರಬಂಧ ಬರೆಯಬೇಕೆಂಬುದಕ್ಕೆ ಈ ಲೇಖನಗಳಲ್ಲಿ ಹಲಕೆಲ ವಾದರೂ ಮಾದರಿಯಾಗಿವೆ. ಅವಕ್ಕಿಂತಲೂ ಉತ್ತಮ ಲೇಖನಗಳನ್ನು ಬರೆ ಯಲು ಸಾಧ್ಯ; ಬರೆಯಬೇಕು. 'ನೋಟ್ಸು'ಗಳನ್ನು ಆಶ್ರಯಿಸದೆ, ಸ್ವತಂತ್ರ ವಾಗಿ, ಅವುಗಳಲ್ಲಿರುವುದಕ್ಕಿಂತ ಉತ್ತಮ ಲೇಖನಗಳನ್ನು ವಿದ್ಯಾರ್ಥಿಗಳೇ ಮನಸ್ಸು ಮಾಡಿದರೆ ಸ್ವಾವಲಂಬನದಿಂದ ಬರೆಯಬಲ್ಲರೆಂಬುದಕ್ಕೆ ಈ ಸಂಪುಟವೇ ಸಾಕ್ಷಿ. ಇದನ್ನು ಓದುವ ಎಲ್ಲ ವಿದ್ಯಾರ್ಥಿಗಳಲ್ಲಿಯೂ ಆ ಸ್ವಾವಲಂಬನ ಬುದ್ಧಿ ಯನ್ನು ಪ್ರಚೋದಿಸಬೇಕೆಂಬುದೇ 'ವಿಕಾಸ'ದ ಈ ಪ್ರಥಮ ಸಂಪುಟದ ಮುಖ್ಯೋದ್ದೇಶ. ಆದ್ದರಿಂದ, ವಿದ್ಯಾರ್ಥಿಗಳು ಇಲ್ಲಿನ ಲೇಖನಗಳಿಂದ ಸ್ಫೂರ್ತಿ ಪ್ರೇರಣೆಗಳನ್ನು ಪಡೆಯಬೇಕೇ ಹೊರತು ಅವುಗಳನ್ನು ಕಂಠಪಾಠಮಾಡುವ ದೌರ್ಬಲ್ಯಕ್ಕೆ ಮನಸೋಲಬಾರದು.

ಇನ್ನು ಕೃತಜ್ಞತೆಯ ಮಾತು:

ಶ್ರೀ. ಕೆ. ವೆಂಕಟರಾಮಪ್ಪನವರ ಹರಕೆ ಒತ್ತಾಸೆಗಳಿಲ್ಲದಿದ್ದರೆ ಈ 'ವಿಕಾಸ'ದ ಮೊಗ್ಗು ಬಿರಿಯುತ್ತಲೇ ಇರಲಿಲ್ಲ. ಶ್ರೀಯುತರು ಮೈಸೂರಿಗೆ ವರ್ಗವಾಗಿ ಹೋದಮೇಲೆ ಅವರ ಸ್ಥಾನದಲ್ಲಿರುವ ಶ್ರೀ. ಡಿ. ವಿ. ಶೇಷಗಿರಿರಾಯರು ಆ ಒತ್ತಾಸೆಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಈ ಪ್ರಕಟನೆಯ ಯೋಜನೆಗೆ ಕಾಲೇಜಿನ ಪ್ರಿನ್ಸಿಪಾಲರು ಪ್ರೊ॥ ಎಫ್. ಜೆ. ನರೋನ, ಎಂ.ಎ., (ಲಂಡನ್) ಅವರು ವಿಶ್ವಾಸದ ಅನುಮೋದನೆಯಿತ್ತುದಲ್ಲದೆ, ಅನೇಕ ವಿಧಗಳಲ್ಲಿ ಉಪಕಾರ ಮಾಡಿದ್ದಾರೆ. ಮೈಸೂರು ಪೇಪರ್ ಮಿಲ್ಲಿನ ಕಾರ್ಯದರ್ಶಿಯವರು ಒಳ್ಳೆಯ ಕಾಗದ ಒದಗಿಸಿ ಸಹಾಯ ಮಾಡಿದ್ದಾರೆ. ಚಂದಾ ಕೊಟ್ಟ, ಲೇಖನ ಗಳನ್ನು ಬರೆದುಕೊಟ್ಟ ವಿದ್ಯಾರ್ಥಿಗಳ ಸಹಕಾರ ಕಡಮೆಯದಲ್ಲ. ಚಂದಾ ಕೂಡಿಸುವುದು, ಲೇಖನ ಸಂಗ್ರಹಣ, ಲೇಖನಗಳ ಆಯ್ಕೆ–ಈ ಕಾರ್ಯಗಳಲ್ಲಿ ನನ್ನ ಸಹೋದ್ಯೋಗಿಗಳು, ಸಹಕರಿಸಿದ್ದಾರೆ. ವ್ಯಾಪಾರ ಪ್ರಕಟನೆಗಳನ್ನು ಕೊಟ್ಟ ಸಂಸ್ಥೆ ಗಳ, ಮಹನೀಯರ, ಉಪಕಾರವೂ ಸ್ಮರಣೀಯ. ಶಾರದಾ ಮುದ್ರಣಾಲಯದವರ ಹಾರ್ದಿಕ ಸಹಕಾರವಿಲ್ಲದಿದ್ದರೆ, ಸಂಪುಟ ಇಷ್ಟು ಅಚ್ಚುಕಟ್ಟಾಗಿ, ಇಷ್ಟು ಬೇಗನೆ ಹೊರಬೀಳುವುದು ಸಾಧ್ಯವಾಗುತ್ತಿರಲಿಲ್ಲ. ಈ ಎಲ್ಲರಿಗೂ ಕಾಲೇಜಿನ ಕನ್ನಡ ವಿಭಾಗದ ಪರವಾಗಿ ನನ್ನ ಹೃತ್ಪೂರ್ವಕ ವಂದನೆಗಳು ಸಲ್ಲುತ್ತವೆ.

ಈ ‘ ವಿಕಾಸ ’ ನಮ್ಮ ಕಾಲೇಜಿನ ಕನ್ನಡ ಶಾಖೆಯ ವಾರ್ಷಿಕ ಪ್ರಕಟನೆಯಾಗಿ ಉಳಿದು ಬೆಳೆದು ಎಲ್ಲ ಕನ್ನಡ ವಿದ್ಯಾರ್ಥಿ ಲೋಕದ ವಿಕಾಸಕ್ಕೂ ನೆರವಾಗುತ್ತ ಮುನ್ನಡೆಯಲಿ ಎಂದು ನನ್ನ ಸಹೋದ್ಯೋಗಿಗಳ ಪರವಾಗಿ ಹಾರೈಸುತ್ತೇನೆ.

೭-೩-೧೯೫೯

—ಎಂ. ವಿ. ಸೀತಾರಾಮಯ್ಯ
ಸಂಪಾದಕ.

# ಲೇಖನ ವಿಷಯಗಳ ಪಟ್ಟಿ

(ಕೆಲವು ಹೊಸ ವಿಷಯಗಳನ್ನೂ ಈಚೆಗೆ ಸೇರಿಸಿದೆ.)

## ೧. ಕಾವ್ಯಾಂಜಲಿ

೧. ರಾವಣನ ಅಧೋಗತಿ, ೨. ಅವಲೋಕಿನೀ ವಿದ್ಯೆಯ ಹಿತವಚನ, ೩. ಸೀತೆಯ ಶೋಕ–ರಾಮನ ವಿಲಾಪ, ೪. ವಿದುರನ ಆತಿಥ್ಯ, ೫. ಭಾಗವತ ಮಸ್ತಕ ರತ್ನ ವಿದುರ, ೬. ದುರ್ಯೋಧನನಿಗೆ ಕೃಷ್ಣನ ಹಿತೋಪದೇಶ, ೭. ದುರ್ಯೋಧನನು ಜಗದ ಪಾಲಕನನ್ನು ಜರೆದ ಬಗೆ, ೮. ಕೃಷ್ಣಬಂಧನ ಪ್ರಯತ್ನ, ೯. ಕೃಷ್ಣನ ಮಹಿಮಾ ಪ್ರದರ್ಶನದ ಸನ್ನಿವೇಶಗಳು, ೧೦. ವಿಶ್ವ ರೂಪ ವಿಹಾರಿ ಮುರವೈರಿ, ೧೧. ಮೂರ್ಖರ ಮೌಳಿ ದುರ್ಯೋಧನ, ೧೨. ದುರ್ಯೋಧನನ ದೃಷ್ಟಿಯಲ್ಲಿ ಕೃಷ್ಣ, ೧೩. ಕುಮಾರವ್ಯಾಸನ ಕೃಷ್ಣ, ೧೪. ಶಿವನು ನಂಬಿಯಣ್ಣನನ್ನು ತನ್ನ ತೊತ್ತುಮಾಡಿಕೊಂಡ ಬಗೆ.

## ೨. ಮಧ್ಯಮ ವ್ಯಾಯೋಗ

೧. "ಮಧ್ಯಮ ವ್ಯಾಯೋಗ" ಹೆಸರಿನ ಸಾರ್ಥಕತೆ, ೨. ಬ್ರಾಹ್ಮಣ ಕುಟುಂಬದ ಸ್ವಜನ ವಾತ್ಸಲ್ಯ, ೩. ಭೀಮ–ಘಟೋತ್ಕಚರ ಕಲಹ, ೪. ತಂದೆ ಮಕ್ಕಳ ಸಮಾಗಮ, ೫. ಹಿಡಿಂಬಾ ಪುತ್ರ ಘಟೋತ್ಕಚ, ೬. ಘಟೋತ್ಕಚನ ರೂಪವೈಭವ, ೭. ಬ್ರಾಹ್ಮಣ ಕುಟುಂಬ ಸಂರಕ್ಷಕ, ೮. ಬ್ರಾಹ್ಮಣ ವಟು ಮಧ್ಯಮನ ಘನತೆ, ೯. ಸಜ್ಜನ ಸ್ಪರ್ಧೆ, ೧೦. ಘಟೋತ್ಕಚನ ಮಾನವೀಯತೆ, ೧೧. ಪಾಂಡವ ಮಧ್ಯಮನ ಶೀಲಸ್ವಭಾವ, ೧೨. ನಾಟಕದಲ್ಲಿ ಹಿಡಿಂಬೆಯ ಪಾತ್ರಮಹತ್ವ.

## ೩. ಕರ್ಮಯೋಗಿ

೧. ಸುಗ್ಗವ್ವೆಯ ಕನಸು ನನಸಾದ ಬಗೆ, ೨. ಮಲ್ಲಯ್ಯನ ಸಂದರ್ಶನ, ೩. ಮುಗ್ಧರಾಮನು ಸಿದ್ಧರಾಮನಾದ ಬಗೆ, ೪. ಸಿದ್ಧರಾಮನ ಅನುಭಾವ ಸಿದ್ಧಿ,

೫. ಕಲ್ಲಯ್ಯ-ಸಂಗಯ್ಯ, ೬. 'ಕರ್ಮಯೋಗಿ' ಸಿದ್ಧರಾಮ ಅಥವಾ ಕರ್ಮ ಯೋಗ ಸಿದ್ಧಿ, ೭. ಪವಾಡಪುರುಷ ಸಿದ್ಧರಾಮ, ೮. ಬಿಲ್ಲೇಶ ಬೊಮ್ಮಯ್ಯ, ೯. ಕರುಣಾಳು ಸಿದ್ಧರಾಮ, ೧೦. ಸಿದ್ಧರಾಮನ ಮೂರ್ತಿಸ್ವರೂಪ, ೧೧. ಸಿದ್ಧ ರಾಮ-ಅಲ್ಲಮರ ಪರಸ್ಪರ ಪ್ರಭಾವ, ೧೨. ಸಂಗಯ್ಯ-ಚೆನ್ನವ್ವೆಯರ ಸಂಸಾರ ಯೋಗ.

## ೪. ಚಂದವಳ್ಳಿಯ ತೋಟ

೧. ಕರಿಯಪ್ಪನ ಕುತಂತ್ರ, ೨. ಶಿವನಂಜೇಗೌಡ-ನರಹರಪ್ಪ ಇವರ ಸ್ನೇಹಚಿತ್ರ, ೩. "ಕುಲಕ್ಕೆ ಮೃತ್ಯು ಕೊಡಲಿಯ ಕಾವು", ೪. ಚಂದವಳ್ಳಿಯ ವೈಭವದ ಚಿತ್ರ, ೫. ನಂದನ ನರಕವಾದ ಬಗೆ, ೬. ಸುಬ್ಬಾಭಟ್ಟ-ಜಲಜಾಕ್ಷಮ್ಮ (ವ್ಯಕ್ತಿಚಿತ್ರಗಳು), ೭. ಹನುಮಯ್ಯ-ರಾಮಯ್ಯ (ವ್ಯಕ್ತಿಚಿತ್ರ ಗಳು), ೮. "ಚಂದವಳ್ಳಿಯ ತೋಟ"ದಲ್ಲಿನ ಸಾಮಾಜಿಕ ಸಮಸ್ಯೆ, ೯. "ಚಂದವಳ್ಳಿಯ ತೋಟ"ದಲ್ಲಿನ ಹಳ್ಳಿಯ ಜೀವನ ಚಿತ್ರ, ೧೦. ಶಿವನಂಜೇ ಗೌಡನ ಜೀವನ ದುರಂತ, ೧೧. ಚೆನ್ನವ್ವೆ-ಲಕ್ಷ್ಮಿ (ಹೋಲಿಕೆ).

## ೫. ಭಾವವಿಸ್ತರಣ

೧. ಈಸಬೇಕು ಇದ್ದು ಜೈಸಬೇಕು, ೨. ದುಡ್ಡಿದ್ದವನೇ ದೊಡ್ಡಪ್ಪ, ೩. ಕುಂಬಾರನಿಗೆ ವರುಷ ದೊಣ್ಣೆಗೆ ನಿಮಿಷ, ೪. ಕತ್ತಿಗಿಂತ ಲೇಖನಿ ಪ್ರಖರ, ೫. ಗೆದ್ದಲ ಗೂಡು ಹಾವಿನ ಹುತ್ತ, ೬. ಗಂಡಸಿಗೆ ಓದು ಒಡವೆ, ೭. ಊರೂರು ತಿರುಗಿ ನೋಡಿದರೆ ನಮ್ಮೂರೇ ವಾಸಿ, ೮. ಪಾಲಿಗೆ ಬಂದದ್ದು ಪಂಚಾಮೃತ, ೯. ನಾನು ಮೆಚ್ಚಿದ ನಾಟಕ.

೬. ನನ್ನ ಮೆಚ್ಚಿಗೆಯ ಮೂರು ಪದ್ಯಗಳು (ಪ್ರಶಂಸೆ)

# ವಿ ಕಾ ಸ

(ವಿದ್ಯಾರ್ಥಿ–ಕಾವ್ಯ–ಸಮೀಕ್ಷೆ)

**ಗೌರ್ನಮೆಂಟ್ ಇಂಟರ್‌ಮೀಡಿಯಟ್ ಕಾಲೇಜಿನ**
**ಕನ್ನಡ ವಿಭಾಗದ ವಾರ್ಷಿಕ ಪ್ರಕಟನೆ**

**ಫೆಬ್ರುವರಿ, ೧೯೩೫**

## ಪ್ರಾರ್ಥನೆ

ತದ್ದಿವ್ಯಮವ್ಯಯಂ ಧಾಮ ಸಾರಸ್ವತಮುಪಾಸ್ಮಹೇ |
ಯತ್ಪ್ರಸಾದಾತ್ಪ್ರಲೀಯಂತೇ ಮೋಹಾಂಧತಮಸಚ್ಛಟಾಃ ||

[ಯಾವುದರ ಪ್ರಸಾದದಿಂದ ಮೋಹಾಂಧಕಾರ ಸಮುದಾಯ ತೊಲಗುತ್ತದೆಯೋ ಅಂತಹ ದಿವ್ಯವಾದ ನಾಶರಹಿತವಾದ ಸಾರಸ್ವತಧಾಮವನ್ನು (ಸರಸ್ವತಿಯ ಭಂಡಾರವನ್ನು, ಜ್ಞಾನವನ್ನು ) ಉಪಾಸಿಸೋಣ.]

* * *

ವಾರಿಜಾಸನೆ ಸಕಲ ಶಾಸ್ತ್ರವಿಚಾರದುದ್ಭವೆ ವಚನರಚನೋ |
ದ್ಧಾರೆ ಶ್ರುತಿ ಪೌರಾಣದಾಗಮ ಸಿದ್ಧಿದಾಯಕಿಯೆ ||
ಶೌರಿ ಸುರಪತಿ ಸಕಲ ಮುನಿಜನ ಸೂರಿಗಳಿಗನುಪಮದ ಯುಕುತಿಯೆ |
ಶಾರದೆಯೆ ನರ್ತಿಸುಗೆ ನಲಿದೊಲಿದೆನ್ನ ಜಿಹ್ವೆಯಲಿ ||

**—ಕುಮಾರವ್ಯಾಸ.**

* * *

ಪರಮ ಜಿನೇಂದ್ರವಾಣಿಯೆ ಸರಸ್ವತಿ ಬೇಱದು ಪೆಣ್ಣ ರೂಪಮಂ
ಧರಿಯಿಸಿ ನಿಂದುದಲ್ತದುವೆ ಭಾವಿಸಿಯೋದುವ ಕೇಳ್ವ ಪೂಜಿಪಾ
ದರಿಸುವ ಭವ್ಯಕೋಟಿಗೆ ನಿರಂತರ ಸೌಖ್ಯಮನೀವುದಾನದ
ರ್ಕೆಱಿದಪೆನಾ ಸರಸ್ವತಿಯೆ ಮಾಟ್ಕೆಮಗಿಲ್ಲಿಯೆ ವಾಗ್ವಿಳಾಸಮಂ.

**—ಪಂಪ.**

# ಅವಲೋಕಿನೀ ವಿದ್ಯೆಯ ಹಿತವಚನ

ರಾವಣನು, ರಾಮನ ಪಕ್ಕದಲ್ಲಿ ಮಹಾಸುಂದರಿಯಾದ ಸೀತೆಯು ಕುಳಿತಿರುವುದನ್ನು ನೋಡಿದನು. ಆಕೆಯನ್ನು ನೋಡಿದಾಕ್ಷಣ ಆತನ ಮನಸ್ಸು ಚಂಚಲವಾಯಿತು. ಸೀತೆಯ ಮನೋಹರವಾದ ರೂಪವನ್ನು ರಾವಣನು ತನ್ನ ಮನಸ್ಸಿನಲ್ಲಿಯೇ ನಾನಾ ವಿಧವಾಗಿ ಬಣ್ಣಿಸಿಕೊಂಡನು. ಸೀತೆಯನ್ನು ಹೇಗಾದರೂ ರಾಮನಿಂದ ಅಗಲಿಸಿ ತನ್ನವಳನ್ನಾಗಿ ಮಾಡಿಕೊಳ್ಳಬೇಕೆಂದು ನಾನಾ ರೀತಿಯಾಗಿ ಆಲೋಚಿಸಿದನು. ರಾವಣನು ಮಹಾನುಭಾವ, ಮಹಾ ವಿರಾಗಿ. ಪರಸ್ತ್ರೀಯರನ್ನು ಎಂದೂ ಕಾಮಿಸಿದವನಲ್ಲ. ಅಂತಹ ರಾವಣನು ಈ ಪತಿವ್ರತೆಯಾದ ಸೀತೆಯನ್ನು ರಾಮನಿಂದ ಅಗಲಿಸಲು ಪ್ರಯತ್ನ ಪಡುತ್ತಿದ್ದಾನೆ ಎಂದರೆ ಆಶ್ಚರ್ಯವಲ್ಲವೆ? ಇದು ದುಷ್ಕಾಲದ ಪ್ರಭಾವವಷ್ಟೆ; ಅವನ ತಪ್ಪಲ್ಲ. ತಾನು ಸೀತೆಯನ್ನು ಆಕೆ ಒಬ್ಬಳೇ ಇರುವಾಗ ಕದ್ದೊಯ್ಯಬೇಕು. ಅದಕ್ಕೆ ಏನು ಮಾಡಬೇಕೆಂದು ಆತನಿಗೆ ತಿಳಿಯಲಿಲ್ಲ. ಅದಕ್ಕಾಗಿ ಆತನು ಅವಲೋಕಿನೀ ವಿದ್ಯೆಯನ್ನು ನೆನೆದನು.

ರಾವಣನು ಅವಲೋಕಿನೀ ವಿದ್ಯೆಯನ್ನು ನೆನೆದಾಕ್ಷಣ ಆ ದೇವತೆ ಬಂದು ರಾವಣನ ಸಮ್ಮುಖದಲ್ಲಿ ನಿಂತು ಆಜ್ಞೆ ಏನೆಂದು ಕೇಳಿತು. ರಾಮ ಲಕ್ಷ್ಮಣರು ಯಾರು ಎಂಬುದು ತಿಳಿಯದ ರಾವಣನು, "ಇವರು ಯಾರು?" ಎಂದು ಆ ಅವಲೋಕಿನೀ ವಿದ್ಯೆಯನ್ನು ಕೇಳಿದನು. ಆಗ ಅದು ರಾಮ ಲಕ್ಷ್ಮಣ ಸೀತೆಯರ ಪರಿಚಯವನ್ನು ಈ ರೀತಿಯಾಗಿ ತಿಳಿಸಿತು :—"ಪ್ರಭೂ, ಈ ರಾಮ ಲಕ್ಷ್ಮಣರು, ಅಯೋಧ್ಯೆಯ ಒಡೆಯ, ಇಕ್ಷ್ವಾಕುವಿನ ವಂಶದವನಾದ ಅನರಣ್ಯ ಪುತ್ರ ದಶರಥನ ಮಕ್ಕಳು. ಈ ಬಲದೇವ (ರಾಮ) ವಾಸುದೇವರು (ಲಕ್ಷ್ಮಣ)—ದೇವಾಂಶವಿದ್ದ ವಜ್ರಾವರ್ತ ಸಾಗರಾವರ್ತ ಧನುಸ್ಸುಗಳನ್ನು ಭಂಜಿಸಿದ ರಾಮ ಲಕ್ಷ್ಮಣರು. ಇವರು ಮಹಾಪರಾಕ್ರಮಿಗಳು. ಈ ರಾಮನ ಧರ್ಮಪತ್ನಿ ಸೀತೆ ಎಂಬವಳು, ಮಿಥಿಲಾರಾಜ ಹರಿವಂಶದ ಜನಕನ ಮಗಳು, ರಥನೂಪುರ ಚಕ್ರವಾಳಪುರದ ರಾಜ ಪ್ರಭಾಮಂಡಲನ ತಂಗಿ" ಎಂದಿತು. ಇಷ್ಟು ಕೇಳಿಯೂ ರಾವಣನು ತನ್ನ ದುರ್ಬುದ್ಧಿಯನ್ನು

ಮಾರ್ಪಡಿಸದೆ, ಆ ಅವಲೋಕಿನೀ ವಿದ್ಯೆಯೊಡನೆ, "ಈಕೆಯನ್ನು ರಾಮನಿಂದ ಅಗಲಿಸುವುದು ಹೇಗೆ?" ಎಂದು ಕೇಳಿದನು. ಇದನ್ನು ಕೇಳಿ ಅವಲೋಕಿನೀ ವಿದ್ಯೆಗೆ ಗಾಬರಿಯಾಯಿತು.

ಗಾಬರಿಗೊಂಡ ಅವಲೋಕಿನೀ ವಿದ್ಯಾದೇವತೆಯು ರಾವಣನಿಗೆ ಬುದ್ಧಿ ಹೇಳುತ್ತಾ, "ಪ್ರಭೂ, ಸಾಮಾನ್ಯರೊಡನೆ ವಿರೋಧ ಕಟ್ಟಿಕೊಳ್ಳುವುದೇ ಯೋಗ್ಯವಲ್ಲ. ಅದರಲ್ಲೂ ಅವತಾರಪುರುಷರೂ ಮಹಾಪರಾಕ್ರಮಿಗಳೂ ಆದ ಈ ರಾಮ ಲಕ್ಷ್ಮಣರಲ್ಲಿ ನಿಷ್ಕಾರಣವಾಗಿ ವಿರೋಧವನ್ನು ಬೆಳಸುವುದು ಉಚಿತವಲ್ಲ" ಎಂದು ಹೇಳಿದಳು. ದುರ್ಬುದ್ಧಿಯು ಮೇರೆ ಮೀರಿ ಅಡರಿ ಘನವಾದ ರಾವಣನ ತಲೆಗೆ ಇಂತಹ ಈನ್ನೊಂದು ಹಿತವಚನ ಹೊಕ್ಕು ಆತನ ದುರ್ಬುದ್ಧಿಯು ದ್ರವವಾಗಿ ಇಳಿದೀತೆ? ಆಗ ಆ ವಿದ್ಯಾದೇವಿಯು ಇನ್ನೂ ರಾವಣನಿಗೆ ಬುದ್ಧಿಹೇಳುತ್ತಾ ಹೀಗೆಂದಳು :—"ರಾವಣಾ, ನೀನು ಈ ಇಡೀ ಲಂಕೆಯ ಅಧಿಪತಿ. ಪ್ರಜೆಗಳು ಏನಾದರೂ ತಪ್ಪು ಮಾಡಿದರೆ ಅವರನ್ನು ಶಿಕ್ಷಿಸುವುದು ರಾಜನ ಕರ್ತವ್ಯ. ಅಂತೆಯೆ ಶಿಷ್ಟರನ್ನು ಪರಿಪಾಲನೆ ಮಾಡುವುದೂ ರಾಜನ ಧರ್ಮ. ಅದೇ ರೀತಿಯಾಗಿ ದುಷ್ಟಶಿಕ್ಷಕ ಶಿಷ್ಟಪರಿಪಾಲಕನಾದ ನೀನೇ ಈ ಪರಸ್ತ್ರೀ ಅಪಹರಣದ ಕಾರ್ಯಕ್ಕೆ ಕೈಹಾಕಬಹುದೆ? ನೀನೇ ಈ ರೀತಿಯಾಗಿ ಮಾಡಿದರೆ ಜಗತ್ತನ್ನು ಕಾಯುವವರಾರು? ಕಾಪಾಡಬೇಕಾದವರೇ ಕಾಪಾಡಲ್ಪಡಬೇಕಾದವರನ್ನು ಆಯುಧದಿಂದ ಕೊಂದರು— ಎಂಬ ಗಾದೆಗೆ ಸಮಾನವಾಗುವುದು, ನಿನ್ನ ಕಾರ್ಯ." ಈ ಮಾತು ಕೂಡ ರಾವಣನ ತಲೆಯಲ್ಲಿ ಹೊಗಲಿಲ್ಲ. ಆಕೆ ಇನ್ನೂ ಮುಂದುವರಿದು ಈ ರೀತಿ ಹೇಳಿದಳು :—"ತಣ್ಣೀರಿಗೆ ಆಶ್ರಯಸ್ಥಾನ ಸಮುದ್ರ. ಏನೋ ದುರ್ದೈವವಶಾತ್ ಆ ಸಮುದ್ರದ ನೀರು ಬಿಸಿನೀರಾದರೆ, ಅದನ್ನು ಮೊದಲಿನ ಸ್ಥಿತಿಗೇ ತರಲು ಅಂದರೆ ತಣ್ಣನೆ ಮಾಡಲು ಬೆರೆಸುವುದಕ್ಕೆ ತಣ್ಣೀರನ್ನು ಎಲ್ಲಿಂದ ತರಬೇಕು? ಅದರಂತೆ ಪ್ರಜೆಗಳಲ್ಲಿ ಯಾವನಾದರೂ ಅನ್ಯಾಯಮಾಡಿದರೆ ರಾಜನು ಆತನನ್ನು ಶಿಕ್ಷಿಸುತ್ತಾನೆ. ಆದರೆ ಆ ಪ್ರಜೆಗಳನ್ನು ಅಂಕೆಯಲ್ಲಿಡಬಲ್ಲ ರಾಜನೇ ದಾರಿತಪ್ಪಿದರೆ ಆತನನ್ನು ದಂಡಿಸುವವರಾರು? ದುಷ್ಟ ಶಿಕ್ಷಕ ಶಿಷ್ಟ ಪರಿಪಾಲಕನಾದ ಮಹಾಪ್ರಭು ನೀನೇ ಪರಸ್ತ್ರೀ ಅಪಹರಣಕ್ಕಾಗಿ ಹೊರಟರೆ ನಿನ್ನನ್ನು ದಂಡಿಸುವವರು ಯಾರೂ ಇಲ್ಲ" ಎಂದು ಹೇಳಿತು.

ಆ ಅವಲೋಕಿನೀ ವಿದ್ಯೆಯು ಮುಂದುವರಿದು ಪುನಃ ಈ ರೀತಿ ಬೋಧಿಸಿದಳು—"ಪ್ರಭೂ, ರಾಮಲಕ್ಷ್ಮಣರು ಮಹಾಶೂರರು. ಅವರಿಗಿದಿರಾಗಿ

ಹದಿನಾಲ್ಕು ಸಾವಿರ ಮಹಾಶೂರರು, ಅಸಂಖ್ಯಾತ ಸೈನ್ಯ, ಖರದೂಷಣರು ಇವರೆಲ್ಲಾ ಮಹಾ ಕ್ರೋಧದಿಂದ ಯುದ್ಧಕ್ಕೆ ಬಂದರು. ಲಕ್ಷ್ಮಣನು ವೀರಾವೇಶ ದಿಂದ ತಾನೊಬ್ಬನೇ ಅವರನ್ನು ಬಾಣದಿಂದ ತರಿತರಿದು ನಾಶಮಾಡುತ್ತಿದ್ದಾನೆ. ಇತ್ತ ರಾಮನಾದರೋ ಯುದ್ಧದಿಂದ ಸಂಭವಿಸಬಹುದಾದ ಜಯಾಪಜಯಗಳ ಯಾವ ಆಲೋಚನೆಯೂ ಇಲ್ಲದೆ, ನಿಶ್ಚಿಂತೆಯಿಂದ ತನ್ನ ಸತಿ ಸೀತೆಯೊಡನೆ ಸರಸಸಲ್ಲಾಪದ ಸವಿಯನ್ನು ಸವಿಯುತ್ತ, ಬಹಳ ವಿನೋದದಿಂದಿದ್ದಾನೆ. ತನ್ನ ಅನುಜ ಲಕ್ಷ್ಮಣ ಎಂದಿಗೂ ಅಪಜಯವನ್ನು ಪಡೆಯನೆಂಬುದು ರಾಮನ ದೃಢನಿಶ್ಚಯ. ಆದುದರಿಂದ, ರಾವಣಾ, ನೀನು ಇಂತಹ ಮಹಾವೀರರೊಡನೆ ನಿಷ್ಕಾರಣವಾಗಿ ದ್ವೇಷವನ್ನು ಬೆಳೆಸುವುದರಿಂದ ನಿನಗೆ ಯಾವ ರೀತಿಯಲ್ಲಿಯೂ ಕ್ಷೇಮವಾಗಲಿಕ್ಕಿಲ್ಲ. ಈ ರೀತಿ ಮಾಡುವುದು ಮಹಾಪರಾಧ" ಎಂದು ಹೇಳಿದಳು.

ಹಿಂದೆಂದೂ ಪರಸ್ತ್ರೀಯರಿಗೆ ಆಸೆಪಡದಿದ್ದ ರಾವಣನು ಮನ್ಮಥ ಬಾಣಕ್ಕೆ ಗುರಿಯಾಗಿ ಸೀತೆಯಲ್ಲಿ ಮೋಹಗೊಂಡನು. ಮನ್ಮಥ ಬಾಣಕ್ಕೆ ಗುರಿಯಾದ ಮೇಲೆ ಕೇಳಬೇಕೆ ? ಅದರ ಫಲದಿಂದಾಗಿ ಅವಲೋಕಿನೀ ವಿದ್ಯೆಯು ಎಷ್ಟೊಂದು ಹಿತನುಡಿಯನ್ನು ನುಡಿದರೂ ಅದು ರಾವಣನ ಮನಸ್ಸಿಗೆ ಹತ್ತಲಿಲ್ಲ. ವಿಧಿ (ಬ್ರಹ್ಮ) ನಿಯಮವನ್ನು ಮೀರಲು ಯಾರಿಗೂ ಸಾಧ್ಯವಿಲ್ಲ. ಹಿತನುಡಿಗಳನ್ನು ಎಷ್ಟೊಂದು ನುಡಿದರೂ ಅವುಗಳು ವಿಧಿನಿಯಮವನ್ನು ಹಿಂದಿಕ್ಕಲಾರವು.

ಅವಲೋಕಿನೀ ವಿದ್ಯೆಯ ಹಿತನುಡಿಗಳನ್ನು ರಾವಣನು ಕೇಳಿ ತನ್ನ ಮನಸ್ಸನ್ನು ತಿರುಗಿಸದೆ, ಆ ದೇವತೆಯ ಮೇಲೆಯೇ ಆತನು ರೇಗಿದನು. ರಾವಣನಿಗೆ ಅವಲೋಕಿನೀ ದೇವತೆಯ ಹಿತನುಡಿಯು, ಕೋಣನ ಮುಂದೆ ಕಿನ್ನರಿ ಬಾರಿಸಿದಂತಾಯಿತು. ರಾವಣನು ಆ ದೇವತೆಯನ್ನು ಗರ್ಜಿಸಿ, "ನಾನೊಂದು ಹೇಳಿದರೆ ನೀನು ಇನ್ನೊಂದು ಹೇಳುವೆಯಾ ? ನಾನು ಹೇಳಿದಷ್ಟು ಮಾಡು. ನೀನು ನಿನ್ನ ಮನಸ್ಸು ಬಂದಂತೆ ಕಿರುಚುವೆಯಾ ? ಆ ಮನುಷ್ಯರಿಬ್ಬರು ಇಷ್ಟು ದೊಡ್ಡ ಲಂಕೆಗೆ ಅಧಿಪತಿಯಾದ ನನ್ನನ್ನು ಎದುರಿಸುವರೆ ?" ಎಂದು ಸಿಟ್ಟಿನಿಂದ ನುಡಿದನು. ರಾವಣನು ಗರ್ಜಿಸಿ ತಾನು ಹೇಳಿದಂತೆ ಮಾಡು ಎಂದು ಹೇಳಿದ ಕೂಡಲೆ ವಿದ್ಯಾದೇವತೆಗೆ ಕೋಪ ಬಂದಿತು. ತಾನು ಅವನ ಒಳಿತಕ್ಕೆ ಹಿತನುಡಿಗಳನ್ನು ನುಡಿದರೂ, ಅದನ್ನು ಆತನು ಮನಸ್ಸಿಗೆ ತಂದುಕೊಳ್ಳದೆ, ತನ್ನನ್ನು (ದೇವತೆಯನ್ನು) ನಿಂದಿಸಿದುದಕ್ಕೆ ಯೋಚಿಸಿ, ಆ ದುಷ್ಟ ದುರಹಂಕಾರಿ ದಶಕಂಠನಿಗೆ, ಆ ಸೀತೆಯ ನಿಮಿತ್ತವಾಗಿ ಅಣ್ಣತಮ್ಮಂದಿರಾದ ರಾಮಲಕ್ಷ್ಮಣ ರಿಂದ ಮರಣವು ಸಂಭವಿಸಬೇಕಾಗಿರುವುದರಿಂದ ಅದನ್ನು ಅವನು ಎಂದಿಗೂ

ತಪ್ಪಿಸಿಕೊಳ್ಳಲಾರನೆಂದು ಬಗೆದು ಸುಮ್ಮನಾದಳು. ಪ್ರತಿಯೊಂದು ಜೀವಿಯೂ ತನ್ನ ಪೂರ್ವಜನ್ಮದ ಕರ್ಮಗಳಿಗನುಸಾರವಾಗಿ ತಕ್ಕ ಫಲವನ್ನು ಅನುಭವಿಸ ಬೇಕಾದುದು ವಿಧಿನಿಯಮ. ಅದನ್ನು ತಪ್ಪಿಸಲು ಯಾರಿಂದಲೂ ಸಾಧ್ಯವಿಲ್ಲ. ಅದರಂತೆ ರಾವಣನು ಕೂಡ.

ಆಮೇಲೆ ವಿದ್ಯಾದೇವತೆಯು ಉಪಾಯವಿಲ್ಲದೆ ಪುನಃ ರಾವಣನೊಡನೆ, ಲಕ್ಷ್ಮಣನು ಖರದೂಷಣರ ಮೇಲೆ ಯುದ್ಧಕ್ಕೆ ಹೋಗುವಾಗ ರಾಮನನ್ನು ಸೀತೆಯ ರಕ್ಷಣೆಗೆ ಇರಿಸಿ, ತಾನೊಬ್ಬನೇ ಯುದ್ಧ ಮಾಡುವುದಾಗಿಯೂ, ತನಗೆ ಆ ಸೈನ್ಯವು ಗೆಲ್ಲಲು ಅಸಾಧ್ಯವಾದರೆ ತಾನು ಸಿಂಹನಾದ ಮಾಡುವುದಾಗಿಯೂ, ಆಗ ರಾಮನು ತನಗೆ ಸಹಾಯನಾಗಿ ಬರಬೇಕೆಂದು ಹೇಳಿ ಹೋಗಿದ್ದಾನೆ ಎಂದೂ ಹೇಳಿತು. ಇದನ್ನು ಕೇಳಿ ರಾವಣನು ಬಹಳ ಸಂತೋಷದಿಂದ, ಕೆಲಸ ಇನ್ನೂ ಸುಲಭವಾಯಿತೆಂದು ತಿಳಿದು, ಆ ದೇವತೆಗೆ "ಹಾಗಾದರೆ ನೀನು ಯುದ್ಧ ರಂಗಕ್ಕೆ ಹೋಗಿ, ನಿನ್ನ ಮಾಯಾಶಕ್ತಿಯಿಂದ ಲಕ್ಷ್ಮಣನು ಸಿಂಹನಾದ ಮಾಡಿ ದಂತೆ ಮಾಡು" ಎಂದು ಅಪ್ಪಣೆ ಮಾಡಿದನು. ರಾವಣೇಶ್ವರನ ಆಜ್ಞೆ ಎಂದ ಮೇಲೆ ಕೇಳಬೇಕೆ? ಆ ಅವಲೋಕಿನೀ ವಿದ್ಯೆಯು ರಣರಂಗಕ್ಕೆ ಹೋಗಿ ಲಕ್ಷ್ಮಣನ ಸ್ವರವನ್ನು ಅನುಕರಿಸಿ ಸಿಂಹನಾದವನ್ನು ಮಾಡಿತು. ಈ ಸಿಂಹನಾದ ವನ್ನು ಕೇಳಿ ರಾಮನು ಸಿಂಹನಾದ ಮಾಡಿದವನು ಲಕ್ಷ್ಮಣನೇ ಎಂದು ನಂಬಿ, ಸೀತೆಯನ್ನು ಕುಳ್ಳಿರ ಹೇಳಿ, ಜಟಾಯುವನ್ನು ಸೀತೆಯ ಕಾವಲಿಗಿರಿಸಿ, ಲಕ್ಷ್ಮಣನ ಸಹಾಯಕ್ಕಾಗಿ ಹೋದನು.

ಇಂತು, ಪ್ರಭುಸೇವೆಯಲ್ಲಿ ಬದ್ಧಕರ್ತವ್ಯಳಾದ ಅವಲೋಕಿನೀ ವಿದ್ಯೆಯು ತನಗೆ ಅಧರ್ಮವೆಂದು ಕಂಡುಬಂದ ನೀಚ ಕಾರ್ಯವನ್ನು ವಿರೋಧಿಸಿ, ಹಿತವಚನವೊರೆದು, ಸೇವಾಧರ್ಮದ ಮೇಲುಪಂಕ್ತಿಯನ್ನು ನಮ್ಮ ಮುಂದಿ ಟ್ಟಿರುವಳು. ವಾಲ್ಮೀಕಿ ರಾಮಾಯಣದಲ್ಲಿ ಮಾರೀಚನ ಪಾತ್ರವನ್ನು ಸ್ಮರಣೆಗೆ ತರುತ್ತದೆ ಈ ಅವಲೋಕಿನೀ ವಿದ್ಯೆಯ ಅಮೋಘ ಪಾತ್ರ. ಮಾರೀಚ ನಂತೆಯೇ ವಿಧಿನಿಯಮಕ್ಕೆ ತಲೆಬಾಗಬೇಕಾಯಿತು, ಅಸಹಾಯಕಳಾದ ಅವಲೋಕಿನೀ.

ಕೆಮ್ಮೂರು ಪ್ರಭಾಕರ ಶೆಟ್ಟಿ
(Pu.C.,I.)

# ರಾವಣನ ಅಧೋಗತಿ

ನಾಗಚಂದ್ರನ 'ಪಂಪ ರಾಮಾಯಣ'ವು ಜೈನ ಸಂಪ್ರದಾಯದ ರಾಮಾಯಣವನ್ನು ಅನುಸರಿಸಿ ಬರೆದುದು. ಜೈನ ರಾಮಾಯಣಕ್ಕೂ ವಾಲ್ಮೀಕಿ ರಾಮಾಯಣಕ್ಕೂ ಅನೇಕ ವ್ಯತ್ಯಾಸಗಳಿವೆ. ಆ ವ್ಯತ್ಯಾಸಗಳಲ್ಲಿ, ರಾವಣನ ಪಾತ್ರವನ್ನು ಚಿತ್ರಿಸಿರುವ ರೀತಿಯೂ ಒಂದು. ಇದಕ್ಕೆ ಅನುಸಾರವಾಗಿ, ನಾಗಚಂದ್ರನು ರಾವಣನನ್ನು ವಿಧಿಯ ಕೈಗೊಂಬೆಯಾಗಿ ಚಿತ್ರಿಸಿದ್ದಾನೆ; ಅವನ ಅಧೋಗತಿಯಲ್ಲಿ ನಮ್ಮ ಮರುಕ ಅವನ ಕಡೆಗೆ ಹೋಗುವಂತೆ ಮಾಡಿದ್ದಾನೆ.

ರಾವಣೇಶ್ವರ ಸೀತೆಯನ್ನು ಕಾಣುವುದಕ್ಕೆ ಮುನ್ನ ಒಬ್ಬ ಉನ್ನತ ವ್ಯಕ್ತಿಯಾಗಿದ್ದ. ಖೇಚರ ವಂಶಕ್ಕೆ ತಿಲಕಪ್ರಾಯನಾಗಿದ್ದ; ದಿಗ್ವಿಜಯವನ್ನು ಮಾಡಿ ಸಕಲ ಭೂಮಂಡಲಕ್ಕೂ ಒಡೆಯನಾಗಿದ್ದ; ಅನಂತವೀರ್ಯ ಕೇವಲಿಗಳೆಂಬ ಮಹಾಮುನಿಗಳ ಚರಣ ಸನ್ನಿಧಿಯಲ್ಲಿ ಪರಾಂಗನೆಯರನ್ನು ಸೋದರಿಯರಂತೆ ಭಾವಿಸುವುದಾಗಿ ವಚನ ಕೈಗೊಂಡಿದ್ದ. ಅದರಂತೆ, "ಪಲರುಂ ವಿದ್ಯಾಧರ ಸ್ತ್ರೀಯರುಂ, ಅಮರಿಯರುಂ, ಮಾನವ ಸ್ತ್ರೀಯರುಂ, ತನ್ನೊಲವಿಂ ಮೇಲ್ವಾಯ್ದೊಡಂ ಮುನ್ನ ಬಗೆಯದ ಬಗೆ"ಯುಳ್ಳವನಾಗಿದ್ದ. ಇದಕ್ಕೆ ಒಂದು ಹೃದಯಂಗಮ ನಿದರ್ಶನವನ್ನೂ ಕೊಡಬಹುದು :

ರಾವಣ ಒಂದು ಬಾರಿ ದಿಗ್ವಿಜಯಕ್ಕೆ ಹೊರಟಾಗ, ದುರ್ಲಂಘ್ಯಪುರದ ವಜ್ರಸಾಲವೆಂಬ ಅಭೇದ್ಯವಾದ ವಿದ್ಯಾಕೋಟೆಯೊಂದನ್ನು ಜಯಿಸಬೇಕಾದ ಸಂದರ್ಭವೊದಗಿತು. ಆ ಕೋಟೆಯನ್ನು ಜಯಿಸಬೇಕಾದರೆ ಪ್ರತಿವಿದ್ಯೆಯ ಸಹಾಯದಿಂದ ಮಾತ್ರ ಸಾಧ್ಯವಾಗುವ ವಿಚಾರ ರಾವಣೇಶ್ವರನಿಗೆ ತಿಳಿದಿತ್ತು. ಆ ಪ್ರತಿ ವಿದ್ಯೆಯನ್ನು ಬಲ್ಲವಳು ಆ ಕೋಟೆಯ ಅರಸಿಯಾದ ಉಪರಂಭೆಯೆಂಬವಳೊಬ್ಬಳು ಮಾತ್ರ. ಅವಳು ರೂಪಿನಲ್ಲಿ ರಂಭೆ ಊರ್ವಶಿಯರನ್ನು ಮೀರಿಸುವಂತಿದ್ದಳು. ಆ ವೇಳೆಗಾಗಲೇ ರಾವಣನಲ್ಲಿ ಉಪರಂಭೆ ಮೋಹಗೊಂಡಿದ್ದಳು. ರಾವಣೇಶ್ವರ ಬಂದುದನ್ನು ತಿಳಿದು, ಅವಳು ತನ್ನ ಪ್ರಣಯ ಭಿಕ್ಷೆಯನ್ನು ದೂತಿಯ ಮೂಲಕ ತಿಳಿಸಿದಳು. ರಾವಣ ಉಪರಂಭೆಯನ್ನು ಮೋಹಿಸದೇ ಇದ್ದರೂ ಕೂಡ, ತನ್ನ ಮಂತ್ರಿಗಳ ಸಲಹೆಯಂತೆ ಅವಳನ್ನು

ಮೋಹಿಸುವವನಂತೆ ನಟಿಸಿದನು. ಕೊನೆಗೆ ಅವಳಿಂದ ಪ್ರತಿವಿದ್ಯೆಯನ್ನು ತಿಳಿದು ಕೊಂಡು, ಆ ಕೋಟೆಯನ್ನು ಜಯಿಸಿದನು. ತನ್ನನ್ನು ಮದುವೆಯಾಗುವಂತೆ ಬಲವಂತಪಡಿಸಿದ ಉಪರಂಭೆಯನ್ನು, ಅವಳು ಮಂತ್ರೋಪದೇಶ ಮಾಡಿದ್ದುದ ರಿಂದ ಗುರುವಿನ ಸಮಾನಳಾಗಿ, ತಾಯಿಯಂತೆ ಆದಳೆಂದು ಭಾವಿಸಿ, ಅವಳನ್ನು ನಿರಾಕರಿಸಿ, ಪತಿಯೊಂದಿಗೆ ಸುಖವಾಗಿರುವಂತೆ ಅವಳನ್ನು ತಿದ್ದಿದನು.

ಆದರೆ, ಇಂತಹ ಇಂದ್ರಿಯನಿಗ್ರಹವುಳ್ಳ ರಾವಣನ ಸ್ಥಿರ ಮನಸ್ಸೂ ಸಹ, ತಂಪಾದ ತೋಪಿನ ಸ್ಥಳದಲ್ಲಿ, ಮಳೆಯಿಲ್ಲದ ವೇಳೆಯಲ್ಲಿ ಉಂಟಾಗುವ ಕುಡು ಮಿಂಚಿನೋಪಾದಿಯಲ್ಲಿದ್ದ ಜಾನಕಿಯನ್ನು ಕಂಡು, 'ಪದ್ಮಪತ್ರದ ಜಲಬಿಂದುವಿ ನಂತೆ' ಚಲಿತವಾಯಿತು. ಈ ರೀತಿ ಸೀತಾದೇವಿಯನ್ನು ಅಪೇಕ್ಷಿಸಿದ್ದರಿಂದ ರಾವಣನು ಕೀಳುಮಟ್ಟಕ್ಕೆ ಇಳಿದಂತಾಯಿತು ; ವಂಶಪರಂಪರೆಯಿಂದ ಬಂದಿದ್ದ ತನ್ನ ಸದ್ಗುಣ ಪ್ರಖ್ಯಾತಿ, ದುಷ್ಟನಿಗ್ರಹ ಶಿಷ್ಟಪ್ರತಿಪಾಲನೆಯ ಕರ್ತವ್ಯ ಬುದ್ಧಿ ಇವನ್ನು ತೊರೆದಂತಾಯಿತು. ಕೇವಲ ನೋಟದಿಂದಲೆ ವಿಷವನ್ನು ಸುರಿಸು ವಂತಹ ಸರ್ಪದ ಹೆಡೆಯ ಮೇಲಿರುವ ಮಣಿಶಲಾಕೆಗೆ ಕೈನೀಡುವ ಮೂರ್ಖ ನಂತೆ ರಾವಣೇಶ್ವರ ಸೀತಾದೇವಿಯನ್ನು ಅಪೇಕ್ಷಿಸಿದನು.

ಅನೇಕ ಸದ್ಭಾವನೆಗಳಿಂದ ಕೂಡಿದ್ದ ರಾವಣ ಈ ರೀತಿ ಏಕಾಏಕಿ ದುರ್ಗತಿ ಗೀಡಾಗಲು ಕಾರಣವಾದರೂ ಏನು ? ಇದು ಹೆಚ್ಚಾಗಿ ಅವನ ತಪ್ಪಲ್ಲ. ಅನೇಕ ಬಾರಿ ರಾವಣನನ್ನು ತನ್ನ ಮೋಹಪಾಶದಲ್ಲಿ ಬಂಧಿಸಬೇಕೆಂದು ವಿಫಲನಾಗಿದ್ದ ಮನ್ಮಥ, ಈ ಒಂದು ಅವಕಾಶವನ್ನು ಉಪಯೋಗಿಸಿಕೊಂಡು, ತನ್ನ ಕುಸುಮ ಬಾಣಕ್ಕೆ ರಾವಣನನ್ನು ಆಹುತಿ ತೆಗೆದುಕೊಂಡನು. "ಪಲಕಾಲಕ್ಕೇಸುವೆತ್ತಂ ದಶಮುಖನೆನುತಂ ಮನ್ಮಥಂ ಮಾಣದೆಚ್ಚಂ". ಈ ರೀತಿ ರಾವಣನ ಮನಸ್ಸು ಚಲಿತವಾಗಲು ಇನ್ನೊಂದು ಕಾರಣ—ಸೀತೆಯ ಸುಂದರ ರೂಪ. ಮನ್ಮಥನ ಕಾರ್ಯದಲ್ಲಿ ಜಾನಕಿಯ ದಿವ್ಯಸ್ವರೂಪ ಸಹಾಯಕವಾಯಿತು. ಹಿಂದೆಂದೂ ಕಂಡಿರದ ಜಾನಕಿಯ ಸುಂದರ ಸ್ವರೂಪ ಲಂಕೇಶ್ವರನನ್ನು ಸಹಜವಾಗಿಯೇ ಕಾಮಪೀಡಿತನಾಗುವಂತೆ ಮಾಡಿತು. "ವಜ್ರದ ಸಂಕಲೆ ಹೃದಯಕ್ಕೆನಿಪ ರೂಪವತಿ ಜಾನಕಿ ಕಣ್ಬೊಲದೊಳಿರೆ" ರಾವಣನ ಚಿತ್ತ ಚಲಿಸಿತು. ರಾವಣನು ಈ ರೀತಿ ದುರ್ಗತಿಗೀಡಾಗಲು ಮತ್ತೊಂದು ಅತಿ ಮುಖ್ಯ ಕಾರಣ ವಿಧಿ ಲಿಖಿತ. "ವಿಸ್ಮಯಾವಹಮಲ್ತಬ್ಧಿಯುಮೊರ್ಮೆ ಕಾಲವಶದಿಂ ಮರ್ಯಾದೆಯುಂ ದಾಂಟದೇ" ಎಂಬ ಮಾತುಗಳಲ್ಲಿ ನಾಗಚಂದ್ರ ಕವಿ ವಿವರಿಸಿರುವಂತೆ ಸಮುದ್ರವೂ ಕೂಡ ಕೆಲವು ಸಂದರ್ಭಗಳಲ್ಲಿ ಕಾಲವಶದಿಂದ ಎಲ್ಲೆ ಮೀರುತ್ತದೆ. ಅದೇ ರೀತಿಯಲ್ಲಿ

ರಾವಣೇಶ್ವರ ವಿಧಿವಶದಿಂದ ಜಾನಕಿಯಲ್ಲಿ ಮೋಹಗೊಂಡನೇ ಹೊರತು, ಹುಟ್ಟು ಗುಣದಿಂದಲ್ಲ. ಈ ರೀತಿ ದುಸ್ಥಿತಿಗೀಡಾದ ಲಂಕಾಧಿಪತಿ ಮದನನ ಬಾಣಕ್ಕೆ ಎಷ್ಟರ ಮಟ್ಟಿಗೆ ತುತ್ತಾಗಿರುತ್ತಾನೆಂದರೆ, ಅವಲೋಕಿನೀ ವಿದ್ಯೆಯಿಂದ ರಾಮ-ಲಕ್ಷ್ಮಣರು ಬಲದೇವ ವಾಸುದೇವರೆಂದು ಅರಿತರೂ ಕೂಡ ಅದರ ಕಡೆಗೆ ಗಮನಕೊಡದೆ, ಅವಲೋಕಿನೀ ವಿದ್ಯೆಯಿಂದ ಲಕ್ಷ್ಮಣನಿಗೆ ಕೇಳದಂತೆ ಲಕ್ಷ್ಮಣನ ಧ್ವನಿಯಲ್ಲಿ ಶ್ರೀರಾಮನಿಗೆ ಕೇಳಿಸುವಂತೆ ಸಿಂಹನಾದಮಾಡಿಸಿ, ಶ್ರೀರಾಮನನ್ನು ಸೀತೆಯಿಂದ ಅಗಲಿಸಿ, ವಂಚನೆಯಿಂದ ಸೀತಾಹರಣ ಮಾಡುತ್ತಾನೆ. ಎಂಥ ಅಧೋಗತಿ, ದಿಕ್ಪಾಲಕರನ್ನೆಲ್ಲ ಭುಜಬಲದಿಂದ ಜಯಿಸಿದ್ದ ಲಂಕಾಪತಿಗೆ! ಈ ದುಷ್ಕಾರ್ಯದಲ್ಲಿ ನಿರಪರಾಧಿಯಾದ ಜಟಾಯುವನ್ನೂ ಸಹಾ ಲಂಕೇಶ್ವರನು ಕೊಲ್ಲುತ್ತಾನೆ. ಒಮ್ಮೆ ಕರುಣಾಮೂರ್ತಿಯಾಗಿದ್ದವನು ಕ್ರೂರಿಯಾಗುತ್ತಾನೆ. ನಾಗಚಂದ್ರನು ಹೇಳುವ "ಪ್ರಗಾತನ ಕರ್ಮಾಯತ್ತಮಪ್ಪೆ ದೇಹಿಗಳೆಸಕಂ" ಎಂಬಂತೆ ರಾವಣೇಶ್ವರ ತನ್ನ ಹಿಂದಿನ ಜನ್ಮದ ಕರ್ಮಕ್ಕೆ ಅಧೀನನಾಗಿದ್ದುದರಿಂದ, ಈ ಹಿಂಸು ದುಷ್ಕಾರ್ಯವನ್ನು ಮಾಡಿ ಲೋಕಾಪವಾದಕ್ಕೆ ಗುರಿಯಾದ. ಅವನು "ಪಳಿಗಂ ಪಾಪಕ್ಕಂ" ಅಂಜದವನಾದ. ಇಂತು, ಲಂಕಾಧಿಪತಿಯಾದ ರಾವಣೇಶ್ವರನ ಅಧೋಗತಿಯನ್ನು ಕಂಡು ನಮ್ಮಲ್ಲಿ ಅವನ ಬಗ್ಗೆ ಜುಗುಪ್ಸೆಗಿಂತ ಹೆಚ್ಚಾಗಿ ಮರುಕ ಉಂಟಾಗುತ್ತದೆ. ರಾವಣ ಒಬ್ಬ ದುರಂತನಾಯಕ ಎಂಬ ಭಾವನೆ ನಮ್ಮಲ್ಲಿ ಮೂಡುತ್ತದೆ.

—ಎಚ್. ಎಸ್. ಶಂಕರ್
(Pu.C.,D.)

---

# ಸೀತೆಯ ಶೋಕ - ರಾಮನ ವಿಲಾಪ

ಲಂಕಾಸಾಮ್ರಾಜ್ಯದ ಅಧಿಪತಿಯಾದ ದಶಾಸ್ಯನು ಸಕಲ ಸೌಭಾಗ್ಯಗಳನ್ನೂ, ವಿಶ್ವದ ಮಾನವರಿಗೆ ಆದರ್ಶವಾದ ಸಮಸ್ತ ಗುಣಗಳನ್ನೂ ಹೊಂದಿದ್ದ ಮಹಾ ವ್ಯಕ್ತಿ. ಕೀರ್ತಿ, ಐಶ್ವರ್ಯ, ಗಾಂಭೀರ್ಯ, ಪೌರುಷ, ಯೋಗ್ಯತೆ, ಸತ್ಯ, ಧರ್ಮ, ಪ್ರೇಮ, ಶುಚಿತ್ವ ಇತ್ಯಾದಿ ನವರತ್ನ ಗುಣಗಳಿಂದಲಂಕೃತವಾದ ಸಿಂಹಾಸನದಲ್ಲಿ ಮಂಡಿಸುತ್ತಿದ್ದ ದಶಕಂಠ ವಿಧಿವಶಾತ್ ಇಂದು ಆ ಸಿಂಹಾಸನದಿಂದ ಅಧೋಗತಿಗಿಳಿಯುವ ಸ್ಥಿತಿ ಬಂತು. ರಾವಣನು ತನ್ನ ವಿದ್ಯಾಧಿದೇವತೆಯಾದ ಅವಲೋಕಿನಿಯ ಸಹಾಯದಿಂದ, ತನ್ನ ವಾಯುವಾಹನದಿಂದಿಳಿದು, ಕಾದ ಕಬ್ಬಿಣವನ್ನು ದೋಷಿ ಉತ್ಸಾಹದಿಂದ ಹಿಡಿಯುವಂತೆ ಸೀತಾಮಾತೆಯನ್ನು ಹಿಡಿದೆತ್ತಿಕೊಂಡು ತನ್ನ ಪುಷ್ಪಕವಿಮಾನದಲ್ಲಿ ಕುಳ್ಳಿರಿಸಿಕೊಂಡನು. ಸೀತೆಯನ್ನು ಕಾದುಕೊಂಡಿರಲು ತನ್ನ ಯಜಮಾನ ಶ್ರೀರಾಮನಿಂದ ನೇಮಿಸಲ್ಪಟ್ಟ ಜಟಾಯುವು ಕೋಪದಿಂದ ಕೆರಳಿ ರಾವಣನನ್ನೆದುರಿಸಲು ಎದುರಿಗೆ ಬಂದನು. ಆಗ ರಾವಣನು, ಇಂದ್ರನು ತನ್ನ ವಜ್ರಾಯುಧದಿಂದ ಬೆಟ್ಟವನ್ನು ಕಡಿದು ಕೆಡಹುವಂತೆ, ಕಡಿದೊಡನೆ ಬೆಟ್ಟದಂತೆ ಜಟಾಯುವು ಭೂಮಿಗೆರಗಿದನು. ಮಾನವನ ಬಾಳಿನಲ್ಲಿ ಅಮರಪಾತ್ರವನ್ನು ವಹಿಸಿಕೊಂಡು ಒಮ್ಮೆ ಜೀವನದ ಕಡಲಿನ ದುಃಖದ ದಡಕ್ಕೂ, ಮತ್ತೊಮ್ಮೆ ಸಂತೋಷದ ದಡಕ್ಕೂ ಕೊಂಡೊಯ್ಯುವ ಆ ವಿಧಿಯ ಬರಹವನ್ನು ಮೀರುವವರಾರು ? ಅದರ ಲೀಲೆಯನ್ನು ಕಂಡವರಾರು ? ವಿಧಿ ಸೀತೆಯ ಪಾಲಿಗೆ ವಿರುದ್ಧವಾಗಿತ್ತು.

ಶಿಶಿರಋತುವಿನ ಹಿಮಗಾಳಿಗೆ ಬಳ್ಳಿಯ ಎಲೆ ಮೊಗ್ಗುಗಳೆಲ್ಲಾ ಉದುರಿಹೋಗಿ ಹಿಂದೆ ಸಕಲ ಸೌಂದರ್ಯಪೂರ್ಣವಾಗಿದ್ದ ಬಳ್ಳಿ ಬರಡುಕಡ್ಡಿಯಾಗುವಂತೆ, ಶ್ರೀರಾಮನ ಪ್ರೇಮದ ಪತ್ನಿ ಸೀತಾಮಾತೆಯ ತುಂಬುಜೀವನ ದುಷ್ಟ ರಾವಣನೆಂಬ ಹಿಮಗಾಳಿಗೆ ಸಿಕ್ಕಿ ಬರಿದಾಗಿಹೋಯಿತು.

ಜಟಾಯುವಿನ ಈ ಅಂತ್ಯಾವಸ್ಥೆಯನ್ನೀಕ್ಷಿಸುತ್ತಿದ್ದ ವೈದೇಹಿಯ ಶೋಕ ಹೆಚ್ಚಿತು. ಮನಸ್ಸು ಕ್ರೋಧದಿಂದ ಬೆಂದು ಕಠಿನವಾಯಿತು. ಕಣ್ಣುರೆಪ್ಪೆಯ ದಡವನ್ನು ಮೀರಿದ ಕಂಬನಿಯ ಸಾಗರನನ್ನು ಹರಿಸಿದಳು. ಆ ರಮಣಿಯ

ಕೋಮಲ ಕಂಠ, ಪತಿಯ ಅಗಲುವಿಕೆಯಿಂದ ಕಂಬನಿ ಸುರಿಸಿ ಸುರಿಸಿ ಸಾಕಾಗಿ, ಗದ್ಗದಿತವಾಯಿತು. ಇದ್ದಕ್ಕಿದ್ದಂತೆಯೇ ಆಕೆಯ ಬಾಯಿಂದ 'ಹಾ!' ಎಂಬ ಚೀತ್ಕಾರವೊಮ್ಮೆ ಹೊರಹೊಮ್ಮಿತು. ದಿಕ್ಕು ತೋಚದೆ ವಿಧವಿಧವಾಗಿ ಪರಿತಪಿಸಿದಳು. ಅವಳ ರೋದನವು ಆಕಾಶಮಾರ್ಗವಾಗಿ ಹೋಗುತ್ತಿದ್ದ ಪುಷ್ಪಕ ವಿಮಾನದಲ್ಲಿ ಪ್ರತಿಧ್ವನಿಸಿ ದಿಕ್ಪಾಲಕರೇ ಅಳುವಂತೆ ತೋರುತ್ತಿತ್ತು. ತನ್ನ ಬಾಳಿನಲ್ಲಿ ಅಂಬಿಗನಾವಿಕನ ಪಾತ್ರವನ್ನು ವಹಿಸಿ, ಸುಖಸಂತೋಷದ ಕಡಲಲ್ಲಿ ಜೀವನ ನೌಕೆಯನ್ನು ಅತ್ಯಾನಂದದ ದಡವನ್ನು ಸೇರಿಸುತ್ತಿದ್ದ ಪತಿ ಶ್ರೀರಾಮನಿಂದ ಅಗಲಿಸಲ್ಪಟ್ಟ ಸೀತಾಮಾತೆಯು ರಾವಣನನ್ನೊಮ್ಮೆ ದೃಷ್ಟಿಸಿ ನೋಡಿದಳು. ಅಸಹಾಯಕಳಾದ ಅವಳಿಗೆ ದುಃಖ ಉಕ್ಕಿಬಂತು. ಹೆದರಿಕೆ ಹೆಚ್ಚಾಯಿತು. ಸೀತಾಮಾತೆಯ ದುಃಖತಾಪಕ್ಕೆ ಯಾವ ಬಗೆಯ ಸಮಾಧಾನವನ್ನೂ ಕೊಡಲಾಗದ ಆ ನವರತ್ನಖಚಿತವಾದ ಪುಷ್ಪಕವಿಮಾನದಲ್ಲಿದ್ದ ಬೊಂಬೆಗಳೂ ಸಹ ಸಕಲ ಗುಣ ಸೌಜನ್ಯನಿಧಿಯಾದ ಜಾನಕಿಯ ಕಣ್ಣೀರಿಗೆ ತಮ್ಮ ಕಣ್ಣೀರನ್ನೂ ಬೆರೆಸುತ್ತಿದ್ದುವು. ಅವಳು ಬೆವತಾಗ ಅವೂ ಬೆವತವು. ಈ ಚಿಹ್ನೆಗಳೆಲ್ಲವೂ ಆ ಲಂಕಾಸಾಮ್ರಾಜ್ಯಪತಿಯ ಅಳಿವನ್ನು ಸಾರಿ ಹೇಳುವಂತಿದ್ದುವು.

ತನ್ನ ಅಗಲವಾದ ಗರಿಗಳನ್ನು ಕೆದರಿಕೊಂಡು ನಿರಾತಂಕವಾಗಿ ಕಾನನದಲ್ಲಿ ನಲಿದಾಡುತ್ತಿದ್ದ ನವಿಲು ಬಲೆಗೆ ಬೀಳುವಂತೆ ಸೀತೆಯು ರಾವಣನ ಬಲೆಗೆ ಬಿದ್ದಳು. ಅವಳು ತನ್ನ ನಿಶ್ಚಲವಾದ ನಿರ್ಮಲಚಿತ್ತದಲ್ಲಿ ರಾಮನನ್ನೊಮ್ಮೆ ಸ್ಮರಿಸಿ ಅವನ ಸಾನ್ನಿಧ್ಯವನ್ನು ಬಯಸುತ್ತಿದ್ದಳು. ಪತಿವ್ರತಾಶಿರೋಮಣಿಯಾದ ಆ ಜನಕಜೆಯು, ಸ್ವರ್ಗಲೋಕದಂತಿದ್ದ ಆ ಪುಷ್ಪಕವಿಮಾನದ ಯಾವ ಬಾಹ್ಯಾಡಂಬರಗಳಿಗೂ ಮನಸೋಲದೆ ಅದನ್ನು ನೋಡಲಾರದವಳಾಗಿ, ಪುಷ್ಪದಂತಿದ್ದ ತನ್ನ ಕಣ್ಣುಗಳನ್ನು ಮುಚ್ಚಿ, ಪ್ರಜ್ಞಾಶೂನ್ಯಳಾದಳು. ಹಲವಾರು ನಿಮಿಷಗಳ ನಂತರ ಅಸಹಾಯಕಳಾದ ಆ ಮಾತೆಗೆ ಸಹಾಯಮಾಡುವಂತೆ ದೂರದಿಂದ, ತಂಪಾದ ನಿರ್ಮಲವಾದ ತಂಗಾಳಿಯೊಂದು ಆ ನಾರಿಯ ಮೈಮೇಲೆ ಹಾದು ಹೋಯಿತು. ತತ್‌ಕ್ಷಣ ಆಕೆಗೆ ಜ್ಞಾನ ಬಂದು ಅವಳ ಹೃದಯದಿಂದ ಆಳವಾದ 'ಹಾ!' ಎಂಬ ಚೀತ್ಕಾರವೊಂದು ಹೊರಹೊಮ್ಮಿತು.

ಸೀತಾಮಾತೆಯು ದುಃಖದಿಂದ, "ಕ್ರೂರಾತ್ಮನೂ, ವಂಚಕನೂ, ಅವಿವೇಕಿ ದುರಾಚಾರಿಯೂ ಆದ ದಶಕಂಠನು ನನ್ನನ್ನು ನಿರಾತಂಕವಾಗಿ ತೆಗೆದುಕೊಂಡು ಹೋಗುತ್ತಿದ್ದಾನೆ. ಹಾ ರಾಮ! ಹಾ ರಾಮ! ಇವನನ್ನು ತಡೆದು ನನ್ನ ಪಾತಿವ್ರತ್ಯವನ್ನು ಉಳಿಸಿಕೊಡುವ ಕರುಣಾಳು ಯಾರಿಲ್ಲವೇ? ಈ ಪಾಪಿಯ

ಬಾಳು ಇಂದು ಮಸಣದ ಬಾಳಾಯಿತಲ್ಲವೇ ?" ಎಂದು ವಿಧ ವಿಧವಾಗಿ ಪ್ರಲಾಪಿಸುತ್ತಿದ್ದಳು.

ಹೆಣ್ಣಿನ ಸಹಜವಾದ ಕಣ್ಣೀರಿನ ಒರತೆ ಬತ್ತಿಹೋಗಿ ಅದೆಷ್ಟೋ ದಿನಗಳಾಗಿದ್ದುವು. ಕಳೆದ ಹಲವಾರು ದಿನಗಳಿಂದಲೂ ಪ್ರತಿಯೊಂದು ಕ್ಷಣದಲ್ಲೂ ತನ್ನ ಪ್ರೇಮದ ಪತಿ ಶ್ರೀರಾಮನನ್ನು ಬಿಟ್ಟಿರಲು ಮತ್ತು ಲಂಕಾಸಾಮ್ರಾಜ್ಯದ ರಾವಣನ ಮೋಹದ ಮಡದಿಯಾಗಿ ಬಾಳಲು ಅಸಹ್ಯಗೊಂಡ ಸೀತಾಮಾತೆಯ ಶೋಕವು ಮೂಕ ಕ್ರೋಧದ ಅಗ್ನಿಪರ್ವತವಾಗಿತ್ತು.

ಇತ್ತ, ಲಕ್ಷ್ಮಣನ ಸಹಾಯಕ್ಕೆ ತೆರಳಿದ ಶ್ರೀರಾಮನ ಮನಸ್ಸಿನಲ್ಲಿ ಇದ್ದಕ್ಕಿದ್ದಂತೆಯೇ ಕಳವಳವೂ ಆರಂಭವಾಗಿ ಎಡಗಣ್ಣು ಅದುರಿತು. ಭವಿಷ್ಯದ ಕಾಳಗರ್ಭದಲ್ಲಿ ಹುದುಗಿಕೊಂಡಿರುವ ಕಷ್ಟ-ಕಾರ್ಪಣ್ಯಗಳನ್ನು ಬಲ್ಲವರಾರು? ಶ್ರೀರಾಮನು ತತ್ಕ್ಷಣವೇ ಯಾವ ರೀತಿಯ ಯೋಚನೆಯನ್ನೂ ಮಾಡದೆ, ಪ್ರೇಮದ ಮಡದಿಯ ದರ್ಶನಕ್ಕಾಗಿ ಅತಿವೇಗದಿಂದ ಹಿಂದಿರುಗಿದನು. ಹಿಂದಿರುಗಿ ಬಂದು ಲತಾಭವನದಲ್ಲಿ ತನ್ನ ಮನೋವಲ್ಲಭೆಯಾದ ಜಾನಕಿಯನ್ನು ಕಾಣದೆ, ಬೆಂಕಿಯ ಮುಖಕ್ಕೆ ಪಾದರಸ ಬಡಿದಂತೆ, ಶ್ರೀರಾಮನಲ್ಲಿ ನೆಲೆಗೊಂಡಿದ್ದ ಧೈರ್ಯ ಸಾಹಸಗಳು ಉಡುಗಿಹೋದುವು. ಹಲವಾರು ನಿಮಿಷಗಳ ಮೇಲೆ ಮೈಯಲ್ಲಿ ಶಾಖವುಂಟಾಗಿ ಅಂಗಾಂಗಗಳೆಲ್ಲ ಅದುರಿದುವು. ಮೊಗ್ಗಿನಂತಿದ್ದ ಅವನ ನಾಸಿಕದಿಂದ ಬಿಸಿಯಾದ ಉಸಿರಾಡತೊಡಗಿತು. ಮೊಗ್ಗಿನಂತೆ ಸೇರಿಕೊಂಡ ಅವನ ಕಣ್ಣರೆಪ್ಪೆಗಳು ಬಿರಿದು ಹೂವಾದುವು. 'ಜಾನಕೀ-ಜಾನಕೀ!' ಎನ್ನುತ್ತ ಅರಣ್ಯಮಧ್ಯದಲ್ಲಿ ಅಲೆದಾಡತೊಡಗಿದನು. ಒಂದೇ ಸಮನೆ ಕಾಡಿನಲ್ಲಿ ಅಲೆಯುತ್ತಾ ಸೀತಾಮಾತೆಯನ್ನು ಹುಡುಕಿಕೊಂಡು ಬರುತ್ತಿರುವಾಗ ಅನತಿ ದೂರದಿಂದ ಸಾವಿನ ಒರಲೊಂದು ಶ್ರೀರಾಮನ ಕಿವಿಗೆ ಬಿತ್ತು. ಧ್ವನಿ ಬಂದ ಕಡೆ ಹೋಗಿ ನೋಡಲಾಗಿ ಜಟಾಯು ನರಳುತ್ತಾ ಬಿದ್ದಿದ್ದನು. ಸೀತಾಹರಣವೇ ಜಟಾಯುವಿನ ಈ ಅವಸ್ಥೆಗೆ ನಿಮಿತ್ತವೆಂದು ತಿಳಿದು, ಜಟಾಯುವಿನ ಸಾವಿಗೆ ವಿಧ ವಿಧವಾಗಿ ಪ್ರಲಾಪಿಸಿ, ಜಟಾಯುವಿನ ಮೃತದೇಹಕ್ಕೆ ಪಂಚನಮಸ್ಕಾರಗಳನ್ನು ಹೇಳಿ, ಅದರ ಅಂತ್ಯ ಸಂಸ್ಕಾರವನ್ನು ನಡೆಸಿ, ತನ್ನ ಸತಿಯನ್ನರಸಿಕೊಂಡು ಹೊರಟನು. ಜೀವನದ ಸಂಗಾತಿಯಾಗಿ ಬಾಳಿ ಬೆಳಗಿ ತನ್ನನ್ನಗಲಿದ ಜಾನಕಿಯನ್ನು ಎಲ್ಲೂ ಕಾಣದಿರಲಾಗಿ, ಶ್ರೀರಾಮನು ತನ್ನ ಪವಿತ್ರ ಪ್ರೇಮದ ಅಂತ್ಯ ದರ್ಶನವನ್ನು, ತನ್ನ ದುಃಖವನ್ನು, ಕಾನನದಲ್ಲಿದ್ದ ಸಚರಾಚರ ವಸ್ತುಗಳಲ್ಲಿ

ತೋಡಿಕೊಂಡನು. ಶ್ರೀರಾಮನು ಈ ರೀತಿ ವಿಧವಿಧವಾಗಿ ಪರಿತಪಿಸುತ್ತಾ, ಅರಣ್ಯದ ಎಲ್ಲಾ ವಸ್ತುಗಳನ್ನೂ ಸಂಬೋಧಿಸುತ್ತಾ, "ವಸಂತಮಾಸದ ಎಳೆಯ ಚಿಗುರೇ! ಕಮಲದ ಹೂವೇ! ಕನ್ನೈದಿಲೆಯೇ! ಮದಿಸಿದ ಭ್ರಮರವೇ! ಮದಿಸಿದ ಕೋಗಿಲೆಯೇ! ರಾಜಹಂಸದ ಆಯಾಸಭರಿತವಾದ ನಡಿಗೆಯುಳ್ಳ ನನ್ನ ಸೀತೆಯನ್ನು ಕಂಡಿರಾ? ಕಸ್ತೂರಿಯ ಸುವಾಸನೆಯುಳ್ಳ ನನ್ನ ಸತಿಯನ್ನು ಕಂಡಿರಾ? ಎಳೆದುಟಿಯ ಕಮಲಿನಿಯನ್ನು ಕಂಡಿರಾ? ಗುಂಗುರುಕೂದಲುಳ್ಳ ನನ್ನ ಪ್ರೇಮದ ಪುತ್ಥಳಿಯನ್ನು ನೋಡಿದಿರಾ? ಕೋಗಿಲೆಯ ಕಂಠವುಳ್ಳ ನನ್ನ ಸೀತೆಯನ್ನು ಕಂಡಿರಾ?" ಎಂದು ವಿಧವಿಧವಾಗಿ ತನ್ನಷ್ಟಕ್ಕೆ ತಾನೆ ಸಮಾಧಾನ ಮಾಡಿಕೊಳ್ಳುತ್ತಾ ಮುಂದೆ ನಡೆಯುತ್ತಿದ್ದನು.

"ಸಂಸಾರ ಸಾಮ್ರಾಜ್ಯದಲ್ಲಿ, ನನ್ನ ಹೃದಯಸಿಂಹಾಸನದಲ್ಲಿ ಕುಳಿತು ಏಕೈಕ ಚಕ್ರವರ್ತಿನಿಯಾದ ನನ್ನ ರಾಣಿಯನ್ನು ಕಂಡಿರಾ? ಹಂಸಗಮನೆಯೂ, ಕಮಲಾಕ್ಷಿಯೂ, ಕೋಮಲಾಂಗಿಯೂ ಆದ ವೈದೇಹಿಯನ್ನು ಈಕ್ಷಿಸಿದಿರಾ?" ಎಂದು ಪ್ರಲಾಪಿಸಿದನು. ಅಂದಿನವರೆಗೆ ತನ್ನ ಹೃದಯದ ಪ್ರೇಮಸಾಗರದಲ್ಲಿ ಯಾವ ಅಡ್ಡಿಆತಂಕಗಳಿಲ್ಲದೆ ಸ್ವೇಚ್ಛೆಯಾಗಿ ಈಜಾಡಿದ ತನ್ನ ಸತಿ ಸೀತೆಯೇ ಇಂದು ಬೇಕೆಂತಲೇ ತನ್ನ ಕಣ್ಣಿನಿಂದ ತಪ್ಪಿಸಿಕೊಂಡಿರಬೇಕೆಂದು ತಿಳಿದು, "ಹೇ ಸೀತೆ! ವೈದೇಹಿ! ನನ್ನನ್ನು ಈ ಮಸಣದಲ್ಲಿ ಬಿಟ್ಟು ನೀನು ಅಗಲಿದೆಯಾ? ನನ್ನ-ನಿನ್ನ ಅಮರಪ್ರೇಮವು ಚಿರಂತನವಾಗಿ ಉಳಿಯಲು ಇಚ್ಛೆ ಇಲ್ಲವೆ?" ಎಂದು ಶೋಕಿಸಿದನು. ಇಂದಿನವರೆಗೂ ಪ್ರೇಮದ ಕಡಲಲ್ಲಿ, ಆನಂದದ ನಾವೆಯಲ್ಲಿ, ಜೊತೆಗೂಡಿ ಪಯಣಮಾಡಿದ ಸೀತೆ ಇಂದು ಇಲ್ಲವಾಗಿ ಶ್ರೀರಾಮನಿಗೆ ಅತೀವ ದುಃಖವಾಯಿತು. ಎಷ್ಟೋ ರೀತಿಯಲ್ಲಿ ಹಲುಬಿ ಮಾತನಾಡುತ್ತಾ, ದುಃಖದ ಕಡಲಿಗೆ ಕಣ್ಣೀರಿನ ಪ್ರವಾಹವನ್ನು ಹರಿಸುತ್ತಾ, ಮನ್ಮಥನ ಬೇಗೆಯಿಂದ ಅವನ ದೇಹವು ದಹಿಸುತ್ತಿರಲು, ಒಮ್ಮೆ ಬಳಲುತ್ತಾ ದುಃಖಿಸುತ್ತಾ, ಮತ್ತೊಮ್ಮೆ ತನ್ನ ಪ್ರೇಮದ ಜೀವನಸಂಗಾತಿ ಜನಕಜೆಯಮೇಲೆ ಕೋಪಿಸುತ್ತಾ, ಸತತವಾಗಿ ಕಂಬನಿ ಸುರಿಸುತ್ತಾ, ಅರಣ್ಯದಲ್ಲೆಲ್ಲಾ ಅಲೆದಾಡಿ, ಆಯಾಸದಿಂದ ಸೋತುಹೋದನು.

ಅತ್ತ, ಖರದೂಷಣರನ್ನು ಸಂಹರಿಸಿಬಂದ ಲಕ್ಷ್ಮಣನು, "ಮದಜಲವಿಲ್ಲದ ಆನೆಯಂತೆ; ಚಂದ್ರನ ರೇಖೆಯಿಲ್ಲದ ವಿಶಾಲ ನಭದಂತೆ; ತೀರವೇ ಇಲ್ಲದ ಕಡಲಂತೆ; ಸಿಂಹಿಣಿಯಿಲ್ಲದ ಸಿಂಹದಂತೆ; ಸತಿ ಸೀತೆಯಿಲ್ಲದ ಪತಿ ಶ್ರೀರಾಮನು ದುಃಖದಿಂದ ನರಳುತ್ತಿದ್ದುದನ್ನು ನೋಡಿ, ಲಕ್ಷ್ಮಣನು ಅತ್ತಿಗೆಯ

ಅಗಲುವಿಕೆಗಾಗಿ ಅಣ್ಣನ ಕಂಬನಿಯ ಕಡಲಿಗೆ ತನ್ನ ಶೋಕಪ್ರವಾಹವನ್ನೂ ಹರಿಸಿದನು.

—ಜೆ. ಎಸ್. ಮೋಹನರಾವ್
(Pu.C.,P.)

---

# ವಿದುರನ ಆತಿಥ್ಯ

ಶ್ರೀಕೃಷ್ಣ ಪರಮಾತ್ಮನು ಧೃತರಾಷ್ಟ್ರನ ಅರಮನೆಯಿಂದ ನೇರವಾಗಿ ತನ್ನ ಭಕ್ತನಾದ ವಿದುರನ ಮನೆಗೆ ಬಂದನು. ಆಗ ವಿದುರನು ತನ್ನ ಮಂದಿರ ದಿಂದ ಹೊರಹೊರಟು, ಪರಮ ಸಂತೋಷಭರಿತನಾಗಿ, ಪರಮಾತ್ಮನನ್ನು ಸಂದರ್ಶಿ ಸಿದನು. ದರ್ಶನಮಾತ್ರದಿಂದ ಅವನ ಇಂದ್ರಿಯಗಳು ಪರಿಶುದ್ಧವಾದುವು; ಮನಸ್ಸು ಸಂತೋಷದಲ್ಲಿ ತಲ್ಲೀನವಾಗಿ, ಆ ಸಂತೋಷವು ದೇಹವನ್ನು ಆವರಿಸಿ, ಅವನ ಕಣ್ಣುಗಳಿಂದ ಸುಖಮಯವಾದ ಕಣ್ಣೀರು ಸುರಿಯುತ್ತಿತ್ತು. ಆಳವಾದ ಭಯಭಕ್ತಿಯಿಂದಲೂ, ಹೆಚ್ಚಾದ ಲವಲವಿಕೆಯಿಂದಲೂ ಕೂಡಿ, ತನ್ನ ಮನೆ ಯಿಂದ ಹೊರಕ್ಕೆ ಬರುತ್ತಾ ಶ್ರೀಕೃಷ್ಣ ಪರಮಾತ್ಮನನ್ನು ಕಂಡನು. ರಥ ಪ್ರಯಾಣದಿಂದ ಬಂದಿದ್ದ ಕೃಷ್ಣಪರಮಾತ್ಮನ ಪಸನ್ನವಾದ ಮುಖವು ಬೆವರು ಹನಿಗಳಿಂದ ಮನೋಹರವಾಗಿತ್ತು; ಕುದುರೆಯ ಗೊರಸಿನಿಂದ ಮೇಲೆದ್ದ ಕೆಂಪು ದೂಳಿನ ಕಣಗಳು ಪರಮಾತ್ಮನ ಸೌಂದರ್ಯಯುತವಾದ ತಲೆಗೂದಲ ಮತ್ತು ಮೀಸೆಯ ತುದಿಯಲ್ಲಿ ಕುಳಿತು, ಅವು ಕೆಂಪಾಗಿ ಕಾಣುತ್ತಿದ್ದುವು. ಕ್ರೂರನಾದ ಸೂರ್ಯನ ಕಿರಣಗಳ ಸೆಕೆಗೆ ಬಾಡಿದ ಎಳೆಯ ತುಳಸಿಯ ದಂಡೆ ಕೊರಳಲ್ಲಿ ಕಂಗೊಳಿಸುತ್ತಿತ್ತು. ಇಂತಹ ಪರಮಾತ್ಮನನ್ನು ಬಾಗಿಲಲ್ಲಿ ನೋಡಿದ ವಿದುರನು ಶ್ರೀಮನ್ನಾರಾಯಣನ ದರುಶನದಿಂದ ಆದ ರೋಮಾಂಚದ ಬೆವರಿನಿಂದ ತೊಯ್ದು, ಸಂತೋಷದ ಕಾಡಿನಲ್ಲಿ ತನ್ನ ಮನಸ್ಸಿನ ದಾರಿಯನ್ನು ತಪ್ಪಿ, ಮೈಮರೆತನು. ಮಹಾಮಹಿಮಾವಂತನಾದ, ಕರುಣಾಮಯನಾದ, ಶ್ರೀ ಕೃಷ್ಣಪರಮಾತ್ಮನು ಹೊಸದಾಗಿ ತನ್ನ ಮನೆಗೆ ಬಂದುದು ಅಪೂರ್ವಯೋಗವೆಂದು ವಿದುರನು ಹಿಗ್ಗಿದನು.

ವಿದುರನು ಪರಮಾತ್ಮನನ್ನು ಮನಸ್ಸು ದಣಿಯುವಷ್ಟು ಹೊತ್ತು ನೋಡಿದನು; ಮತ್ತು ಕೃಷ್ಣಪರಮಾತ್ಮನನ್ನು ಕೊಂಡಾಡುತ್ತಾ ಬೀದಿಯಲ್ಲಿ ಸುತ್ತಾಡಿದನು. ಸಂತೋಷದಿಂದ ಕುಣಿಯುತ್ತಾ ಮೈಮರೆತು ತನ್ನ ಮನೆಯನ್ನು ಕಿತ್ತು ಎಸೆದಾಡಿದನು. ಭಕ್ತಿಯ ಕ್ರೀಡೆಯಲ್ಲಿ, ಹರ್ಷದ ಆವೇಶದಲ್ಲಿ ಕುಣಿದಾಡಿದನು. ಭಕ್ತನ ಈ ಭಕ್ತಿಯ ಉದ್ರೇಕವನ್ನು ಕಂಡು, " ನಾವು ಹಸಿದು ಬಂದಿರುವಾಗ ನೀನು ಈ ರೀತಿ ಆವೇಶಗೊಂಡು ಕುಣಿಯುತ್ತ ಮನೆಯನ್ನು ಕಿತ್ತುಹಾಕಿದರೆ ನಮಗೆ ತೃಪ್ತಿಯಾಗುತ್ತದೆಯೇ? ಕೌರವರಾಜನು ಪ್ರಾರ್ಥಿಸಿದರೂ ಹೋಗದೆ ಬಂದಿದ್ದೇವೆ. ಹೊಟ್ಟೆಗೆ ಹಾಕದೆ, ಭಕ್ತನ ಮನೆಯಲ್ಲಿ ನಿರಾಶೆಗೊಂಡ ಎನ್ನಿಸಿ, ನಮ್ಮನ್ನು ನಾಚಿಸಬೇಡ, ಬಾ ವಿದುರ" ಎಂಬುದಾಗಿ ಪರಮಾತ್ಮನು ಒಳಕ್ಕೆ ಪ್ರವೇಶಿಸಿದನು. ಆಗ ವಿದುರನು ತನ್ನ ಕರ್ತವ್ಯಜ್ಞಾನವನ್ನು ಕಳೆದುಕೊಂಡನು ; ಅವನ ಮನಸ್ಸು ಶ್ರೀಕೃಷ್ಣನನ್ನು ಸಿಕ್ಕಿಸಿಕೊಂಡು ಕಟ್ಟಿಹಾಕಿತು ; ದೃಷ್ಟಿ ಶ್ರೀಕೃಷ್ಣ ಪರಮಾತ್ಮನ ಪಾದದಲ್ಲಿ ಬೆಸೆದುಹೋಯಿತು. ಅತ್ಯಂತ ಹೆಚ್ಚಾದ ಭಕ್ತಿಯ ಬೆರಗನ್ನು ಹೊಂದಿ ವಿದುರನು ಮೌನದಿಂದಿದ್ದನು. ಸದಾ ಹಾಲಿನ ಸಮುದ್ರದಲ್ಲಿಯೇ ಇರುತ್ತಿದ್ದ ಕೃಷ್ಣನು ವಿದುರನ ಮನೆಯಲ್ಲಿ ಒಂದು ಕುಡಿತೆ ಹಾಲಿನಲ್ಲಿ ತನ್ನ ಹಸಿವನ್ನು ಪರಿಹರಿಸಿಕೊಂಡನು. ಅವನ ಈ ಭಕ್ತಪರಾಧೀನತೆಯನ್ನು ಕಂಡು ಲೋಕ ಕೊಂಡಾಡಿತು. ಶ್ರೀಹರಿಯ ಪಾದಕಮಲಕ್ಕೆ ಅಭಿಷೇಕವಾದ ಹಾಲಿನ ಹನಿಗಳು ಕೌರವನ ಅರಮನೆಯ ಮುಂದೆ ಹರಿದು ಬರುತ್ತಿರಲು, ಅವನ್ನು ಕಂಡು, " ಏನು ಇದು ! ಶ್ರೀಕೃಷ್ಣಪರಮಾತ್ಮನ ಹಾಲಿನ ಸಮುದ್ರ ಎಲ್ಲೆ ಮೀರಿ ಬಂದಿದೆ !" ಎಂಬುದಾಗಿ ಭೀಷ್ಮಾದಿಗಳು ಆಶ್ಚರ್ಯಗೊಂಡು ಹೊಗಳಿದರು. ಆಗ, ಹೊರಟು ಹೋಗಿದ್ದ ಪ್ರಾಣ ಬಂದಂತೆ, ಶ್ರೀಕೃಷ್ಣರಾಯನ ಆಗಮನದಿಂದ ಪರಮ ಸಂತೋಷಗೊಂಡು ಕೃಷ್ಣದರ್ಶನಾತುರಳಾಗಿ ಓಡಿಬಂದಳು ಕುಂತಿ. ಕುಂತೀ ಕೃಷ್ಣರ ಪರಸ್ಪರ ಕುಶಲಪ್ರಶ್ನೆಗಳಾದ ಮೇಲೆ, ಕೃಷ್ಣನ ಅಜ್ಞೆಯಂತೆ ವಿದುರನು ಕೌರವನ ಆಸ್ಥಾನಕ್ಕೆ ಹೋಗಿ, ಅವನ ಸಮಯವನ್ನು ತಿಳಿದುಬಂದನು. ಅನಂತರ ಶ್ರೀಕೃಷ್ಣನು ವೈಭವದಿಂದ ಕೂಡಿದ ಕೌರವನ ಆಸ್ಥಾನಕ್ಕೆ ಹೋಗಿ, ಎಲ್ಲರ ಗೌರವಕ್ಕೂ ಪಾತ್ರನಾದನು. ದುರ್ಯೋಧನನು ಮಾತ್ರ ಕೃಷ್ಣನನ್ನು ತಿರಸ್ಕಾರದಿಂದ ಕಂಡು, ತೊತ್ತಿನ ಮಗನಾದ ವಿದುರನ ಆತಿಥ್ಯವನ್ನು ಪಡೆದುದಕ್ಕಾಗಿ ಹೀಯಾಳಿಸಿದನು. ತನ್ನ ನಿಂದೆಯನ್ನು ಕೇಳಿದ ವಿದುರನು, ಕೌರವನನ್ನು ಭೀಮನಿಂದ ಸಲಹುವುದಕ್ಕೆಂದು ಉಳಿಸಿಕೊಂಡಿದ್ದ ಬಿಲ್ಲನ್ನು ಕೋಪಾವಿಷ್ಟನಾಗಿ ಮುರಿದುಹಾಕಿಬಿಟ್ಟನು. ಹೀಗೆ, ವಿದುರನ ಆತಿಥ್ಯವನ್ನು ಕೃಷ್ಣನು ಸ್ವೀಕರಿಸಿದ್ದರ

ಪರಿಣಾಮವಾಗಿ ವಿದುರನ ರಕ್ಷೆ ಕೌರವನ ಪಾಲಿಗೆ ಇಲ್ಲವಾಯಿತು. ಸಂಧಾನಕ್ಕೆ ಮೊದಲೇ ಕೃಷ್ಣನು ಭೇದೋಪಾಯದ ಬಲೆ ಬೀಸಿದ್ದನೆಂದು ಇದರಿಂದ ಊಹಿಸ ಬಹುದಲ್ಲವೆ?

—ಎಂ. ಕೆ. ತಮ್ಮಣ್ಣ
(Pu.C.,Q.)

---

# ದುರ್ಯೋಧನನಿಗೆ ಕೃಷ್ಣನ ಹಿತೋಪದೇಶ

ದುರ್ಯೋಧನನ ಹೃದಯದ ಕತ್ತಲನ್ನು ಹೋಗಲಾಡಿಸಲು ಪೂರ್ಣ ಚಂದ್ರನು ಹರಡುವ ಎಳೆಯ ಬೆಳುದಿಂಗಳಿನ ರೀತಿಯಲ್ಲಿ ಶ್ರೀಕೃಷ್ಣನ ಹಲ್ಲುಗಳು ಹೊಳೆಯುತ್ತಿರಲು, ಸಮುದ್ರದೋಪಾದಿಯಲ್ಲಿದ್ದ ಆ ಮಹಾಸಭೆಯು ನಿಶ್ಶಬ್ದ ವಾಗಿರಲು, ಕೌರವ ಕುಲದೀಪಕನಾದ ದುರ್ಯೋಧನನಿಗೆ ಶ್ರೀಕೃಷ್ಣನು ಹಿತೋಪ ದೇಶ ಮಾಡುತ್ತಾನೆ.

"ಎಲೈ ದುರ್ಯೋಧನನೆ, ಪಾಂಡವರು ಒಪ್ಪಂದದಂತೆ ವನವಾಸವನ್ನು ಅನುಭವಿಸಿ, ಕಷ್ಟಪಟ್ಟು, ಕೃಶಿಸಿ ಹೋದರು. ರಾಜ್ಯದಲ್ಲಿ ಅರ್ಧವನ್ನು ನ್ಯಾಯವಾಗಿ ಸಲ್ಲಬೇಕಾದ್ದನ್ನು, ಪಾಂಡವರಿಗೆ ಕೊಟ್ಟು ಅವರೊಡನೆ ಕೂಡಿ ಕೊಂಡು ಬಾಳುವುದು ನಿನ್ನ ದೊಡ್ಡ ಗುಣ. ಅಶಾಶ್ವತವಾದ ಈ ಪ್ರಪಂಚದಲ್ಲಿ ಪುರುಷಾರ್ಥವನ್ನು ಸಾಧಿಸಲು ಕಲಿಯಬೇಕು. ರಾಜತ್ವ ಹೆಚ್ಚಾಗುತ್ತಾ ಬರಲು ಕಣ್ಣುಗಳು ಸರಿಯಾಗಿ ಕಾಣುವುದಿಲ್ಲ. ಇದು ಈಗಿನ ಕಾಲದ ರಾಜರ ಬಳಕೆ. ಐಶ್ವರ್ಯದ ಅಹಂಕಾರದಿಂದ ಕಣ್ಗತ್ತಲೆ ಹಿಡಿದ ಕಣ್ಣುಗಳಿಗೆ ನೀತಿಕಾರರ ಮಾತು ಅಂಜನದಂತೆ; ಆಗ ಅವುಗಳಿಗೆ ನೀತಿ ಹೊಳೆಯುವುದು.

"ಬೊಕ್ಕಸ, ಸೈನ್ಯ, ಪ್ರಭುತ್ವ, ಕೋಟೆಕೊತ್ತಲ, ವಿಸ್ತಾರವಾದ ರಾಜ್ಯ, ಸಚಿವರು, ಮಿತ್ರರಾಜರುಗಳೆಂಬ ಏಳು ರಾಜ್ಯಾಂಗಗಳು ಚಕ್ರವರ್ತಿಯಾದವನಿಗೆ ಇದ್ದರೆ ಅವನನ್ನು ಎದುರಿಸಲು ಯಾರಿಗೂ ಸಾಧ್ಯವಿಲ್ಲ. ನಿನಗೆ ಮಿತ್ರರಾಜರು ಗಳೆಂಬುದರ ಹೊರತು ಮತ್ತೆಲ್ಲವೂ ಇದೆ. ಪಾಂಡವರ ಸಹಾಯ ನಿನಗೆ ದೊರಕಿದನಂತರ ನಿನ್ನನ್ನು ಯಾರೂ ಎದುರಿಸಲಾರರು. ಸಾಮೋಪಾಯವು ರಾಜ

ನೀತಿಯಲ್ಲಿ ಉತ್ತಮವಾದ ಮಾರ್ಗ ; ರಾಜರ ವಿಶೇಷವಾದ ವೈಭವಕ್ಕೆ ಇದು ಮೂಲವಾದ್ದು. ಸಾಮ ತಪ್ಪಿದ ಬಳಿಕ ರಾಜನೀತಿ ನಿಂತಹಾಗೆಯೆ. ಯುದ್ಧ ಸಾಮಾನ್ಯ ತೆರವಾದುದು. ಪಾಂಡವರು ನೀನು ಮಾಡಿದ ಅಪಕಾರಗಳನ್ನು ಮರೆತು ಸಹ ಆಡುವುದಿಲ್ಲ. ಪ್ರೀತಿಯಿಂದ ನಿನ್ನ ಜೊತೆಯಲ್ಲಿ ಕೂಡಿಕೊಂಡು ಬಾಳಲು ಆಶಿಸುತ್ತಾರೆ. ಕಾಡಿನಲ್ಲಿ ನಮಗೆ ತಿಳಿದ ಹಾಗೆ ಕಷ್ಟಪಟ್ಟರು. ನೀನು ಅವರಿಗೆ ಮರ್ಯಾದೆ ಮಾಡಿ ದೇಶವನ್ನು ಕೊಟ್ಟರೆ ವಿದುರನಿಗೆ ಹಬ್ಬ ; ಕೃಪಾಚಾರ್ಯ, ಭೀಷ್ಮ, ಧೃತರಾಷ್ಟ್ರ ಇವರಿಗೆಲ್ಲ ಬಹಳ ಸಂತೋಷ" ಎಂದು, ಶ್ರೀ ಕೃಷ್ಣನು ಕೌರವ ಚಕ್ರವರ್ತಿ ದುರ್ಯೋಧನನಿಗೆ ನಯನುಡಿಯಾಡಿದನು. ಆದರೆ, ಮಹಾಖಳನಾದ ಕೌರವೇಂದ್ರನು ಅಸಮಾಧಾನವನ್ನು ಸೂಚಿಸಲು, ಸಭೆ ಹೆದರಿತು. ಆಗ ಪರಶುರಾಮ ನಾರದರು ಕೃಷ್ಣನ ಮಾತಿಗೆ ಕಿವಿ ಕೊಡಬೇಕೆಂದು ಅವನಿಗೆ ಬುದ್ಧಿವಾದ ಹೇಳಲು, ಶ್ರೀ ಕೃಷ್ಣನು ಮತ್ತೆ ಕೌರವನಿಗೆ ಇಂತು ಹೇಳತೊಡಗಿದನು :

"ಕಾಡಿನಲ್ಲಿ ಗೆಡ್ಡೆಗೆಣಸುಗಳನ್ನು ತಿಂದು ಜೀವಿಸುವ ಈ ಪರಶುರಾಮ ನಾರದರಿಗೆ ಈ ಭೂಮಿಯ ರಾಜರ ಹೆದರಿಕೆಯಿಲ್ಲ, ಇವರಿಗೆ ಪಾಂಡವರ ಪಕ್ಷಪಾತವಿಲ್ಲ. ಇವರ ಮಾತನ್ನು ಕೇಳಿ, ನ್ಯಾಯವಾಗಿ ಪಾಂಡವರಿಗೆ ರಾಜ್ಯವನ್ನು ಕೊಡು" ಎನ್ನಲು, ದುರ್ಯೋಧನನು ಮೀಸೆಯ ಮೇಲೆ ಬೆರಳನ್ನಿಟ್ಟು ಮುಗುಳ್ನಗೆ ನಗುತ್ತಾ, ಮಾತನಾಡಿದನು. ಆಗ ಪುನಃ ಶ್ರೀಕೃಷ್ಣನು ದುರ್ಯೋಧನನಿಗೆ ಈ ರೀತಿ ಉಪದೇಶ ಮಾಡಿದನು :

"ಸಂಧಿಗೆ ಒಪ್ಪಿ ಪಾಂಡವರೊಡನೆ ಕೂಡಿಕೊಂಡು ಬಾಳು. ನಾವು ಹೇಳುವ ಒಳ್ಳೆಯ ಮಾತುಗಳನ್ನು ಕೇಳಿ ಸಿಟ್ಟಾಗಬೇಡ. ಇತರರ ಸವಿಮಾತುಗಳಿಗೆ ಕಿವಿಗೊಡಬೇಡ. ಚಾಡಿಯ ಮಾತುಗಳನ್ನು, ಪುರುಳು ಮಾಡಿ ಕೊನೆಗೆ ಕೈಬಿಡುವ ಕಪಟಿಗಳಾದ ಬಾಯಿಮಾತಿನ ಗೆಳೆಯರ ಮಾತನ್ನು, ಕೇಳಬೇಡ. ಪಾಂಡವರ ಜೊತೆಯಲ್ಲಿ ಕೂಡಿಕೊಂಡು ಬಾಳುವುದು ನಿನಗೂ ಪಾಂಡವರಿಗೂ ಹಿತವಾದದ್ದು. ಪಾಂಡವರಿಗೆ ಇಂದ್ರಪ್ರಸ್ಥದಲ್ಲಿ ರಾಜ್ಯವನ್ನು ಪರಿವಾರ ಸಮೇತ ಕೊಟ್ಟು ಪಾಂಡವ ರಾಜ್ಯವನ್ನು ಸ್ಥಾಪಿಸಿದವನು ಎಂಬ ಹೆಸರನ್ನು ಪಡೆದರೆ ಪ್ರಪಂಚದಲ್ಲಿ ನಿನಗೆ ತಲೆಯನ್ನು ತೋರಿಸುವ ರಾಜರಿಲ್ಲ. ಈ ಮಾತುಗಳು ಈಗ ನಿನ್ನ ಕಿವಿಗೆ ಕಠೋರವಾದರೆ ಕೊನೆಗೆ ಒಳ್ಳೆಯದಾಗುವುದು. ಈ ಕೌರವವಂಶವು ನ್ಯಾಯ ಧರ್ಮ ನೀತಿಗಳಿಗೆ ತವರುಮನೆ, ಐಶ್ವರ್ಯಕ್ಕೆ ಪ್ರಸಿದ್ಧವಾದದ್ದು; ಎಲ್ಲಾ ವಿಧವಾದ

ಸುಖಗಳಿಗೆ ಬೀಜದೋಪಾದಿಯಲ್ಲಿರತಕ್ಕದ್ದು. ದುರಾಸೆಯಿಂದ ನೀನು ರಾಜ್ಯಕ್ಕಾಗಿ ಆಸೆಪಟ್ಟು, ಕೌರವವಂಶಕ್ಕೆ ದ್ರೋಹಿಯಾಗಬೇಡ.

"ಭೂಲೋಕದ ಸಾಮಾನ್ಯರಾಜರಿಗೆ ಹಸ್ತಿನಾಪುರದ ಚಕ್ರವರ್ತಿಯ ದರ್ಶನ ಸಿಕ್ಕುವುದು ದುರ್ಲಭ. ಇಷ್ಟು ಶ್ರೇಷ್ಠವಾದ ಚಕ್ರವರ್ತಿಯ ಪಟ್ಟಕ್ಕೆ ಪಾಂಡವರು ಹೊರಗಿನವರಾದರೆ, ನಿನ್ನ ಐಶ್ವರ್ಯ ಶೋಭಿಸುವುದೆ? ದುರಾಶೆಯನ್ನು ಬಿಡು. ಧರ್ಮರಾಯನು ನಿನಗೆ ಒಳ್ಳೆಯವನು; ಅರ್ಜುನನ ಅಭಿಮಾನ ನಿನ್ನಲ್ಲಿ ದೊಡ್ಡದು; ಭೀಮನ ಕೋಪದ ಮಾತು ಅಡಗಿ ಹೋಗಿದೆ; ನಕುಲ ಸಹದೇವರು ನಿನ್ನಲ್ಲಿ ಭೇದವನ್ನೇ ಅರಿಯರು. ಆ ಐವರೂ ನಿನ್ನ ಒಳ್ಳೆಯ ಮಾತನ್ನು ಬಯಸುತ್ತಾರೆ. ಮೂರ್ಖತನವನ್ನು ಮಾಡದೆ ನಿನ್ನ ಸಹೋದರರನ್ನು ಕಾಪಾಡು." ಕೃಷ್ಣನ ಮಾತಿಗೆ ಉತ್ತರವಾಗಿ ದುರ್ಯೋಧನನು ಪಾಂಡವರ ಪ್ರೀತಿವಿಶ್ವಾಸ ತನಗೆ ಬೇಡವೆಂದು ಹೇಳಿ, ದುಶ್ಯಾಸನನನ್ನು ನೋಡುತ್ತಾನೆ. ದುಶ್ಯಾಸನನು ಸಂಧಿಯಾಗುವುದಿಲ್ಲವೆಂದು ಕೃಷ್ಣನಿಗೆ ಹೇಳುತ್ತಾನೆ. ಆಗ ಭೀಷ್ಮ ದ್ರೋಣರು ದುರ್ಯೋಧನನಿಗೆ ಕೃಷ್ಣನ ಮಾತನ್ನು ಕೇಳಬೇಕೆಂದು ಸಲಹೆ ಮಾಡುತ್ತಾರೆ. ಆಗ ದುರ್ಯೋಧನನು, ತಾನು ಪಾಂಡವರಿಗೆ ಮಾಡಿದ ಅನ್ಯಾಯವೆಲ್ಲವನ್ನೂ ಒಪ್ಪಿಕೊಂಡು, ಪಾಂಡವರಿಗೆ ಮತ್ತೆ ಕಾಡೇ ಗತಿಯೆಂದು ನುಡಿದುಬಿಟ್ಟನು. ಆಗ ಕೃಷ್ಣನು ನಗುತ್ತಾ ಹೇಳುತ್ತಾನೆ:

"ಸತ್ಯವನ್ನು ಉಳಿಸಲು, ಕುಲಕ್ಕೆ ಅಪಕೀರ್ತಿ ಬರದಂತೆ ಇರಲು, ಪಾಂಡವರು ಅರಣ್ಯದಲ್ಲಿ ಕಾಲ ತಳ್ಳಿದರು. ಈಗ ಅರ್ಧರಾಜ್ಯವನ್ನು ಪಡೆಯುವ ಹಟವನ್ನು ಭೀಮನೇನು ಬಿಡುತ್ತಾನೆಯೆ? ಪಾಂಡವರಿಗೆ ಅರ್ಧರಾಜ್ಯವಿಲ್ಲದಿದ್ದರೆ, ಕುಶಸ್ಥಳ, ವೃಕ್ಷಸ್ಥಳ, ವಾಸಂತಿ, ವಾರಣಾವತ ಇವಲ್ಲದೆ ನಿನ್ನ ಮನಸ್ಸಿಗೆ ಬಂದ ಇನ್ನೊಂದು ಊರನ್ನೂ ಕೊಡು" ಎಂದು ಕೊನೆಯದಾಗಿ ಕೇಳುತ್ತಾನೆ. (ಏಕೆಂದರೆ, ಧರ್ಮರಾಯನು ಕೃಷ್ಣನೊಡನೆ ಆಲೋಚಿಸುವಾಗ, ದುರ್ಯೋಧನನು ಸಂಧಿಗೆ ಒಪ್ಪದೆ ಹೋದರೆ ಕೆಲವು ಊರುಗಳ ಹೆಸರು ಹೇಳಿ ಯಾವುದಾದರೂ ಒಂದು ಊರನ್ನು ಕೊಡಿಸು ಎಂದು ಹೇಳಿರುತ್ತಾನೆ.) ಈ ಮಾತಿಗೂ ದುರ್ಯೋಧನನು ಒಪ್ಪದೆ, ಐದು ಊರು ಇರಲಿ, ಕಡೆಗೆ ಒಂದು ಮುಳ್ಳಿನ ಮೊನೆ ಊರುವಷ್ಟು ಭೂಮಿಯನ್ನೂ ಕೊಡುವುದಿಲ್ಲವೆಂದು ಹೇಳಿದಾಗ ಯುದ್ಧ ನಿಶ್ಚಯವಾಗುತ್ತದೆ.

ಬಿ. ಜಿ. ರಾಘವೇಂದ್ರರಾವ್
(Pu.C., N.)

# “ಮಧ್ಯಮ ವ್ಯಾಯೋಗ” ನಾಟಕದ ಹೆಸರಿನ ಔಚಿತ್ಯ

ಹತ್ತು ಬಗೆಯ ಸಂಸ್ಕೃತ ರೂಪಕಗಳಲ್ಲಿ ‘ವ್ಯಾಯೋಗ’ವೂ ಒಂದು. ‘ವ್ಯಾಯೋಗ’ ಏಕಾಂಕ ನಾಟಕ. ಅಂದರೆ, ನಾಟಕದ ಮೊದಲಿನ ತೆರೆಯಿಂದ ಕಡೆಯ ತೆರೆಯವರೆಗೂ ಯಾವ ವಿಧವಾದ ತೆರೆಗಳ ಬದಲಾವಣೆಯಾಗದೆ ಒಂದೇ ಪರದೆಯಲ್ಲಿ ನಡೆಯುವ ಪೂರ್ತಾ ನಾಟಕ. ಈ ವ್ಯಾಯೋಗದಲ್ಲಿ ಸ್ತ್ರೀ ಸಂಬಂಧವಲ್ಲದ ‘ಜಗಳ’ (ವ್ಯಾಯೋಗ) ಮುಖ್ಯವಸ್ತು.

ಭಾಸನ ಈ ಏಕಾಂಕ ನಾಟಕದಲ್ಲಿ, ವೃದ್ಧ ಬ್ರಾಹ್ಮಣ ಕೇಶವದಾಸನ ಕುಟುಂಬದ ಪುತ್ರರುಗಳಲ್ಲಿ ದ್ವಿತೀಯನು ‘ಮಧ್ಯಮ’ ಪುತ್ರ. ಇದೇ ರೀತಿ, ಕುಂತೀದೇವಿಯ ಮಕ್ಕಳುಗಳಲ್ಲಿ (ಕೌಂತೇಯರಲ್ಲಿ) ಭೀಮಸೇನನು ಮಧ್ಯಮ ಪುತ್ರನಾಗಿದ್ದನು. ಈ ನಾಟಕದಲ್ಲಿ ಇಂತಹ ಮಧ್ಯಮ ಪುತ್ರರರುಗಳ ಪಾತ್ರವು ಹೆಚ್ಚು ಪ್ರಾಮುಖ್ಯತೆಯನ್ನು ಪಡೆದು, ಚಿನ್ನದಲ್ಲಿ ಸುಗಂಧವೂ ಸೇರಿದಂತಾಗಿ, ಈ ದೃಶ್ಯಕಾವ್ಯವು ತುಂಬಾ ರಸವತ್ತಾಗಿದೆ. ಈ ಇಬ್ಬರು ಮಧ್ಯಮರ ಮತ್ತು ವ್ಯಾಯೋಗವೆಂಬ ಏಕಾಂಕ ನಾಟಕ ಲಕ್ಷಣದ ಪ್ರಾಮುಖ್ಯತೆಯೇ “ಮಧ್ಯಮ ವ್ಯಾಯೋಗ”ವೆಂಬ ಹೆಸರಿನ ಸಾರ್ಥಕತೆಗೆ, ಔಚಿತ್ಯಕ್ಕೆ, ಮುಖ್ಯ ಕಾರಣವೆಂದು ಹೇಳಬಹುದು. ಜೊತೆಗೆ, ಬ್ರಾಹ್ಮಣ ಮಧ್ಯಮನ ನಿಮಿತ್ತ ಪಾಂಡವ ಮಧ್ಯಮನಿಗೂ ಅವನ ಪುತ್ರ ಘಟೋತ್ಕಚನಿಗೂ ನಡೆಯುವ ‘ವ್ಯಾಯೋಗ’ ಅಥವಾ ‘ಕಲಹ’ವೂ ಇನ್ನೊಂದು ಮುಖ್ಯ ಕಾರಣ. ಮುಂದೆ, ತಂದೆ ಮಕ್ಕಳ ಸ್ವಾರಸ್ಯವಾದ ಸಮಾಗಮಕ್ಕೆ ಈ ಕಲಹವು ನಿಮಿತ್ತವಾಗುತ್ತದೆ. ಹೇಗೆ ನೋಡಿದರೂ ಹೆಸರು ಒಪ್ಪು.

ಇನ್ನು, ಆ ‘ವ್ಯಾಯೋಗ’ದ ಎಂದರೆ ‘ಕಲಹ’ದ ಸನ್ನಿವೇಶವನ್ನು ಪರಿಶೀಲಿಸೋಣ: ಒಮ್ಮೆ ಘಟೋತ್ಕಚನು ತನ್ನ ತಾಯಿ ಹಿಡಿಂಬೆಯ ಉಪವಾಸಾಂತ್ಯದ ಪಾರಣೆಗೋಸ್ಕರ ಒಬ್ಬ ಮನುಷ್ಯನ ಬೇಟೆಯಲ್ಲಿ ನಿರತನಾಗಿ ಕಾಡಿನಲ್ಲಿ ಹುಡುಕುತ್ತಿದ್ದನು. ಹೀಗೆ ಹುಡುಕಿಕೊಂಡು ಬರುತ್ತಿರಲು ತನ್ನ

ಮುಂಭಾಗದಲ್ಲಿ ಯಾರೋ ಹೋಗುತ್ತಿರುವುದನ್ನು ನೋಡಿ ಅವರನ್ನು ಕೂಗಿದನು. ಇದನ್ನು ಕೇಳಿದ ವೃದ್ಧ ಕೇಶವದಾಸನು ಭಯಗೊಂಡು ತನ್ನ ಸತಿಸುತರೊಡನೆ ನಡುಗುತ್ತಾ ನಿಂತನು. ಆಗ ಘಟೋತ್ಕಚನು ತನ್ನ ತಾಯಿಯ ಆಜ್ಞೆಯನ್ನು ಅವರಿಗೆ ವಿವರಿಸಿ, ಅವರುಗಳಲ್ಲಿ ಯಾರಾದರೊಬ್ಬರನ್ನು ತನ್ನ ಜೊತೆಯಲ್ಲಿ ಕಳುಹಿಸಬೇಕೆಂದು ವೃದ್ಧನಾದ ಕೇಶವದಾಸನನ್ನು ಕೇಳಿದನು. ಆಗ ಕೇಶವದಾಸನು ತಾನು ಅವನ ಜೊತೆಯಲ್ಲಿ ಹೋಗಲು ಅಣಿಯಾದನು ; ಆದರೆ ಘಟೋತ್ಕಚನು, ತನ್ನ ತಾಯಿಯು ಮುದುಕರನ್ನಾಗಲಿ ಹೆಂಗಸರನ್ನಾಗಲಿ ಒಪ್ಪುವುದಿಲ್ಲವೆಂಬ ಅಂಶವನ್ನು ವ್ಯಕ್ತಪಡಿಸಿದನು. ಆಗ ವೃದ್ಧ ಕೇಶವದಾಸನು ತನ್ನ ಮೂವರು ಮಕ್ಕಳುಗಳಲ್ಲಿ ಯಾರಾದರೊಬ್ಬರನ್ನು ಕಳುಹಿಸಬೇಕಾಯಿತು. ಈ ಮೂವರು ಪುತ್ರರುಗಳಲ್ಲಿ, ಜ್ಯೇಷ್ಠನು ತಂದೆಯ ಪ್ರೀತಿಗೂ, ಕಿರಿಯವನು ತಾಯಿಯ ಪ್ರೀತಿಗೂ ಪಾತ್ರರಾದುದರಿಂದ, ಮಧ್ಯಮನಾದ ದ್ವಿತೀಯನು ತಾನಾಗಿ ಘಟೋತ್ಕಚನ ಜೊತೆಯಲ್ಲಿ ಹೋಗಬೇಕಾಯಿತು. ಮಧ್ಯಮನು ಆ ರಾಕ್ಷಸನ ತಾಯಿಯ ಆಹಾರಕ್ಕೆ ತನ್ನನ್ನೇ ತಾನು ಅರ್ಪಿಸಿಕೊಳ್ಳಲು ಸಿದ್ಧನಾದನು ; ಮತ್ತು ತನಗೆ ಕೂಡಲೆ ಯಮನ ಸಾನ್ನಿಧ್ಯ ಸಿಕ್ಕಿದ್ದಕ್ಕೆ ತುಂಬಾ ಸಂತೋಷಪಟ್ಟು "ಧನ್ಯೋಽಸ್ಮಿ" ಎಂದು ಉಚ್ಚರಿಸುತ್ತಾ, ಕಡೆಯ ಬಾರಿ ತನ್ನ ಬಾಯಾರಿಕೆಯನ್ನು ಹಿಂಗಿಸಿಕೊಳ್ಳಲು ಕೊಳದ ಬಳಿಗೆ ಘಟೋತ್ಕಚನ ಅಪ್ಪಣೆ ಪಡೆದನು ಹೊರಟನು. ಸ್ವಲ್ಪ ತಡವಾದುದಕ್ಕೆ ಘಟೋತ್ಕಚನು ಒಂದು ಬಾರಿ ಆರ್ಭಟಿಸಿ ಮಧ್ಯಮನನ್ನು ಕೂಗಿದನು. ಆ ಕೂಡಲೆ ಅಲ್ಲಿಯೇ ಸಮೀಪದಲ್ಲಿ ವ್ಯಾಯಾಮದಲ್ಲಿ ನಿರತನಾದ ಭೀಮಸೇನನು (ಪಾಂಡವರಲ್ಲಿ ಮಧ್ಯಮನು) ತನ್ನ ಸಹೋದರರುಗಳಿಗೆ ಏನೋ ಕಷ್ಟ ಪ್ರಾಪ್ತಿಯಾಗಿದೆ ಎಂದು ಕೂಡಲೆ ಘಟೋತ್ಕಚನ ಬಳಿ ಬಂದು ನಿಂತನು. ಅನಂತರ ಬ್ರಾಹ್ಮಣವಟುವಾದ ಮಧ್ಯಮನೂ ಸಹ ತಾವರೆಯೆಲೆಯಲ್ಲಿ ನೀರನ್ನು ತುಂಬಿಕೊಂಡು ತನಗೆ ತಾನೇ ತರ್ಪಣವನ್ನು ಕೊಟ್ಟುಕೊಂಡು, ಆತುರದಿಂದ ಓಡಿಬಂದು ಘಟೋತ್ಕಚನ ಎದುರು ಬಂದು ನಿಂತನು. ಇಲ್ಲಿ ಇಬ್ಬರು ಮಧ್ಯಮ ಪುತ್ರರುಗಳ ಸುಂದರ ಸಮಾಗಮವು ನಾಟಕದ ಕ್ರಿಯಾಕೇಂದ್ರವಾಗಿ ಪರಿಣಮಿಸಿದೆ.

ಅನಂತರ, ಭೀಮಸೇನನು ಎಲ್ಲಾ ಸಂಗತಿಯನ್ನು ವಿಚಾರಿಸಿ, ನಿಸ್ಸಹಾಯಕ ಬ್ರಾಹ್ಮಣ ಪುತ್ರನನ್ನು ಕಾಪಾಡಲು ನಿಶ್ಚಯಿಸಿ, ತಾನೇ ಆತನ ತಾಯಿಯ ಆಹಾರಕ್ಕೆ ಬಲಿಯಾಗಲು ಒಪ್ಪಿಕೊಂಡು ಹೊರಡುತ್ತಾನೆ. ತಂದೆ ಮಕ್ಕಳಿಗೆ ವಾಗ್ವಾದ ಬೆಳೆದು, ಘಟೋತ್ಕಚನು ಹಿಡಿಂಬಾಪುತ್ರನೆಂಬ ಸಂಗತಿ ಪಾಂಡವ

ಮಧ್ಯಮನಿಗೆ ತಿಳಿದು ಅವನು ಸಂತೋಷಗೊಳ್ಳುತ್ತಾನೆ. ಸಂತೋಷವನ
ವ್ಯಕ್ತಪಡಿಸದೆ, ಮಗನೊಡನೆ ಹುಸಿಯುದ್ಧಕ್ಕೆ ತೊಡಗುತ್ತಾನೆ. ಇಬ್ಬರಿ
ಬಗೆಬಗೆಯ ಯುದ್ಧಗಳಾಗಿ, ಘಟೋತ್ಕಚನು ಸೋಲುತ್ತಾನೆ. ಆದರ
ಮಗನ ಶಕ್ತಿಯ ಪರಿಚಯವಾಗಿ, ಒಪ್ಪಂದದಂತೆ ಅವನನ್ನು ಹಿಂಬಾಲಿಸುತ್ತಾ
ಘಟೋತ್ಕಚನು ಹಿಡಿದುಕೊಂಡುಬಂದಿರುವ ಮನುಷ್ಯನು ಅವನ ತಂದೆಯೆಂ
ತಾಯಿಯಾದ ಹಿಡಿಂಬೆ ಗುರುತಿಸಿದಮೇಲೆ ಘಟೋತ್ಕಚನು ತನ್ನ ತಂದೆಯಿಂ
ಕ್ಷಮೆಯನ್ನು ಬೇಡಿ, ಭೀಮಸೇನನ ಪ್ರೀತಿಪಾತ್ರ ಮಗನಾಗುತ್ತಾನೆ. ಅನಂ
ಭೀಮಸೇನನ ಕುಟುಂಬದವರೆಲ್ಲರೂ ಕೇಶವದಾಸನ ಆಶೀರ್ವಾದಕ್ಕೆ ಪಾತ್ರರಾ
ಆಶ್ರಮದ ಬಾಗಿಲಿನವರೆಗೆ ಬಿಟ್ಟುಬರುತ್ತಾರೆ.

ಇಲ್ಲಿಗೆ ನಾಟಕದ ಸಮಾಪ್ತಿ.

ಈ ಮೇಲಿನ ಕಥಾಂಶಗಳ ಆಧಾರದಿಂದಲೂ ಮತ್ತು ಈ ನಾಟಕ
ಒಂದೇ ಅಂಕದ 'ವ್ಯಾಯೋಗ' ಪ್ರಕಾರವಾಗಿರುವುದರಿಂದಲೂ ಇದನ್ನು "ಮಧ್ಯ
ವ್ಯಾಯೋಗ"ವೆಂದು ಕರೆಯಲಾಗಿದೆ. ಈ ನಾಟಕದಲ್ಲಿ ವೀರ ಕರುಣಾರಸಗ
ಸುಂದರ ಸಮನ್ವಯವು ಮನಸ್ಸಿಗೆ ತುಂಬಾ ಹರ್ಷದಾಯಕವಾಗಿದೆ. ಹೆಸರಿ
ಅರ್ಥಸ್ವಾರಸ್ಯವನ್ನು ಉದ್ದಕ್ಕೂ ತೋರುವ ಈ ಏಕಾಂಕ ನಾಟಕವು ಒಂ
ಅಪೂರ್ವವಾದ ಕಲಾಕೃತಿ.

**—ಆರ್. ಜಿ. ಪ್ರಸಾದ**
(Pu.C.,H.)

---

# ಬ್ರಾಹ್ಮಣ ಕುಟುಂಬದ ಸ್ವಜನ ವಾತ್ಸಲ್ಯ

ವಿಪ್ರ ಕೇಶವದಾಸನೊಮ್ಮೆ ತನ್ನ ಪತ್ನೀ ಪುತ್ರರೊಡಗೂಡಿ ಉತ್ತ
ದಿಕ್ಕಿನ ಉದ್ಯಾಮಕವೆಂಬ ಗ್ರಾಮದಲ್ಲಿ ವಾಸ ಮಾಡುತ್ತಿದ್ದ ತನ್ನ ಸೋದರಮಾ
ಯಜ್ಞಬಂಧುವಿನ ಮಗನ ಉಪನಯನಕ್ಕೆ ಅರಣ್ಯದಲ್ಲಿ ಹೋಗುತ್ತಿರುತ್ತಾ
ಹೀಗೆ ಅಡವಿಯ ಮಧ್ಯದಲ್ಲಿ ಪ್ರಯಾಣ ಮಾಡುತ್ತಿರುವ ಸಮಯದಲ್ಲಿ ದೂರದಿಂ
ಅವುದೋ ವಿಚಿತ್ರ ಧ್ವನಿಯೊಂದು ಬ್ರಾಹ್ಮಣನ ಕಿವಿಗೆ ಬಿತ್ತು. ಅನತಿ ದೂ

ದಲ್ಲಿ ಬರುತ್ತಿದ್ದ ರಾಕ್ಷಸ ರೂಪದ ವ್ಯಕ್ತಿಯೊಂದನ್ನು ನೋಡಿ ಭಯದಿಂದ ಚೀತ್ಕರಿಸಿದರು. ವಿಚಾರ ಮಾಡಿದಾಗ, ಆ ರಾಕ್ಷಸವ್ಯಕ್ತಿಯು (ಘಟೋತ್ಕಚನು) ತನ್ನ ಮಾತೆಯಾಜ್ಞೆಯಂತೆ ಅವಳ ಉಪವಾಸಾಂತ್ಯದ ಪಾರಣೆಗಾಗಿ ಈ ಪ್ರದೇಶ ದಲ್ಲಿ ಯಾವನಾದರೂಬ್ಬ ಮನುಷ್ಯನನ್ನು ಹಿಡಿದುಕೊಂಡು ಹೋಗಲು ಬಂದೆ ನೆಂತಲೂ, ಹಾದಿಯಲ್ಲಿ ಬ್ರಾಹ್ಮಣರು ಸಿಕ್ಕಿದುದು ಬಹಳ ಒಳ್ಳೆಯದಾಯಿತೆಂತಲೂ ತಿಳಿಸಿದನು. ಘಟೋತ್ಕಚನು, "ಪತಿವ್ರತಾಶಿರೋಮಣಿಯಾದ ಸತಿಯನ್ನೊಡ ಗೊಂಡ ನೀನು ನಿನ್ನ ಪುತ್ರರ ಗುಣ–ದೋಷಗಳನ್ನು ತೂಗಿ ಒಬ್ಬನನ್ನು ನನಗೆ ಬಿಟ್ಟುಕೊಡು" ಎಂದನು. ಇದನ್ನು ಕೇಳಿದ ಬ್ರಾಹ್ಮಣನಿಗೆ ಸಿಡಿಲೆರಗಿ ದಂತಾಯಿತು. ಏನೇ ಆಗಲಿ ಜೀವನದಲ್ಲಿ, ಹೀನವಾದರೂ, ಯಾರ ಸೇವೆ ಯನ್ನಾದರೂ ಮಾಡಿ ಉಣ್ಣಬಹುದು. ಆದರೆ ಹೆತ್ತು ಹೊತ್ತು ಸಾಕಿ ಸಲಹಿದ ತನ್ನ ಸ್ವಂತ ಮಕ್ಕಳನ್ನು ಪರರ ಮಡಿಲಲ್ಲಿ ತುಂಬಲು ಯಾವ ತಾಯಾಗಲಿ, ತಂದೆಯಾಗಲಿ, ಒಪ್ಪಿಗೆಯೀಯುವರೇ ? ಬಡವರಾದರೂ ಆ ಮಾತಾಪಿತೃರಿಗೆ ಮಕ್ಕಳೇ ಜೀವನದ ಸಾಧನವಲ್ಲವೇ ? ಬಾಳಿನ ಸುಖ ಸಂತೋಷ ಸೌಭಾಗ್ಯ ಗಳಲ್ಲವೇ ?

ಕೋಪಗೊಂಡ ಬ್ರಾಹ್ಮಣನು, "ಎಲೈ ನೀಚಾ! ಸಕಲಶಾಸ್ತ್ರಪಾರಂಗತ ನಾಗಿ ಇಂದಿನವರೆಗೆ ನನ್ನ ಜೀವನವನ್ನು ಆನಂದನೌಕೆಯಲ್ಲಿ, ಸುಖದ ಕಡಲಲ್ಲಿ ಸಾಗಿಸಿಕೊಂಡು ಬಂದು ಮುಪ್ಪಡಸಿದ ನಾನು ಸಕಲಗುಣಶೀಲಗಳ ಸೌಜನ್ಯನಿಧಿ ಯಾದ ಪುತ್ರನೊಬ್ಬನನ್ನು ಮಾನವನನ್ನು ತಿನ್ನುವ ದಾನವನಿಗೆ ಕೊಡಲು ಸಿದ್ಧನಿರುವೆನೇ ? ಹಾಗೆಲ್ಲಾದರೂ ವಿಧಿಯ ಪ್ರೇರಣೆಯಿಂದ ಕೊಟ್ಟರೂ ಸಹ ಮುಂದಿನ ಭವಿಷ್ಯದ ಕಾಳಗರ್ಭದಲ್ಲಿ ನಾನಿನ್ನೆಂತಹ ಸುಖವನ್ನು ಪಡೆಯಬಲ್ಲೆ ?" ಎಂದು ದುಃಖಿಸಿದನು. ಇದರಿಂದ ಇನ್ನೂ ಉದ್ರೇಕಗೊಂಡ ಘಟೋತ್ಕಚನು ಅವನಾಜ್ಞೆಯಂತೆ ಒಬ್ಬ ಪುತ್ರನನ್ನು ಬಿಟ್ಟುಕೊಡದಿದ್ದರೆ ಇಡೀ ವಿಪ್ರಕುಟುಂಬದ ನಾಶ ಖಂಡಿತವೆಂದು ತನ್ನ ಹಟವನ್ನು ಬಿಡಲೇಯಿಲ್ಲ. ಆಗ ಭ್ರಾಹ್ಮಣನು, ಅಂದಿನವರೆಗೂ ತನ್ನ ಅಮರವಲ್ಲದ, ಅನಿಶ್ಚಿತವಾದ ಜೀವವು ಮಾಡಬೇಕಾದ ಪ್ರತಿಯೊಂದು ಕರ್ತವ್ಯವನ್ನೂ ಮಾಡಿ ವಂಶೋದ್ಧಾರಕ್ಕಾಗಿ ಸಾವನ್ನಪ್ಪಲು ಸಿದ್ಧವಾಗಿದೆಯೆಂದೂ, ವಿಧಿಯಿಂದ ಸಂಸ್ಕಾರ ಹೊಂದಿದೆಯೆಂದೂ, ಅಂತಹ ಆ ಮುದಿದೇಹವನ್ನು ಇಂದು ಆ ರಾಕ್ಷಸಾಗ್ನಿಯಲ್ಲಿ ತನ್ನ ಸುತರಿಗಾಗಿ ಹೋಮಿ ಸ್ಸೈಯ್ಯುವೆನೆಂದೂ ಹೇಳಿದನು. ಆಗ ಪತಿಮಾತ್ರ, ಏಕೈಕದೇವತೆಯಾದ ಅವನ ಸತಿಯು, "ಧರ್ಮಶಾಸ್ತ್ರಾನುಸಾರವಾಗಿ ಪತಿಯನ್ನುಳಿಸಿಕೊಂಡವಳೇ ನಿಜವಾದ

ಪತಿವ್ರತೆಯೆಂದೂ, ತನ್ನ ಶರೀರದಿಂದಲೇ ಪತಿದೇವನನ್ನು ಮತ್ತು ಸುತರನ್ನು ಉಳಿಸುವೆನೆಂದೂ ಹೇಳಿದಳು. ಆಗ ಘಟೋತ್ಕಚನು, ತನ್ನ ಮಾತೆಯು ಹೆಂಗಸನ್ನು ಒಪ್ಪುವುದಿಲ್ಲವೆನ್ನಲು ವೃದ್ಧನು ಮುಂದೆ ಬಂದು, 'ತಾನು ಬರುವೆ'ನೆಂದು ಹೇಳಿದನು. ಘಟೋತ್ಕಚನು, 'ನೀನು ಮುದುಕ, ದೂರ ಹೋಗು' ಎಂದು ಕ್ರೋಧದಿಂದ ಬಿರುನುಡಿಗಳನ್ನಾಡಿದನು.

ಆ ಸಮಯದಲ್ಲಿ ವೃದ್ಧ ದಂಪತಿಗಳ ಜ್ಯೇಷ್ಠಪುತ್ರ ಪ್ರಥಮನು ಮುಂದೆ ಬಂದು, "ತಂದೆಯೇ! ನನ್ನ ಪ್ರಾಣವನ್ನು ಕೊಟ್ಟು ನನ್ನ ಮಾತಾಪಿತೃಗಳ ಪ್ರಾಣವನ್ನುಳಿಸುವೆನು. ನಮ್ಮ ಕುಲದ ರಕ್ಷಣೆಗಾಗಿ ನನ್ನನ್ನು ಇಂದು ಈತನೊಡನೆ ಬಿಟ್ಟುಕಳುಹು" ಎಂದನು. ಆದರೆ ದ್ವಿತೀಯನು, "ಅಣ್ಣಾ! ಅದಾಗದು. ಜ್ಯೇಷ್ಠಪುತ್ರನೇ ಲೋಕದ ಪ್ರತಿಯೊಂದು ಕಾರ್ಯದಲ್ಲೂ ಶ್ರೇಷ್ಠನು. ಆತನು ಪಿತೃಗಳಿಗೆಲ್ಲಾ ಪ್ರಿಯನಾದವನು. ಆದ್ದರಿಂದಲೇ ಇಂದು ನಾನು ನನ್ನ ಪ್ರಾಣವನ್ನು ನಿಮ್ಮೆಲ್ಲರ ರಕ್ಷಣೆಗಾಗಿ ಮೀಸಲಾಗಿಡುವೆನು. ನೀನು ನಿನ್ನ ಗುರು-ಹಿರಿಯರ ಆಚರಣೆಗಳನ್ನು ಸ್ಮರಣೆಗೆ ತಂದುಕೊಂಡು ನನ್ನನ್ನು ಆಶೀರ್ವದಿಸು" ಎಂದು ಹೇಳಿದನು. ಆ ಸಮಯದಲ್ಲಿ ವಯಸ್ಸಿನಲ್ಲಿ ಎಲ್ಲರಿಗಿಂತ ಚಿಕ್ಕವನಾದರೂ ತನ್ನ ಹೊಣೆಯನ್ನರಿತ ತೃತೀಯನು, "ಅಣ್ಣಂದಿರೇ! ಸಂಸಾರದಿಂದ ವೈರಾಗ್ಯ ಹೊಂದಿ ಅತ್ಯುನ್ನತ ಜ್ಞಾನಾರ್ಜನೆ ಮಾಡಿ ಬ್ರಹ್ಮಜ್ಞಾನಿಗಳಾಗಿ ಬಾಳಿ ಬೆಳಗಿದವರೆಲ್ಲನೂ, ಹಿರಿಯಣ್ಣಂದಿರು ಜೀವವನ್ನು ದಾನ ಮಾಡಿದ ತಂದೆಗೆ ಸಮಾನ ಎನ್ನುವರು. ಆದ್ದರಿಂದ ಈ ಗುರು-ಹಿರಿಯರ ಪ್ರಾಣರಕ್ಷಣೆಗಾಗಿ ಜೀವವನ್ನು ಬಲಿಗೊಡಲು ನಾನೇ ಅರ್ಹ" ಎಂದು ಮುಂದೆ ಬಂದನು.

ಆಗ ಪ್ರಥಮನು ಕಿರಿಯ ತಮ್ಮನ ನಿಸ್ವಾರ್ಥ ಬಲಿದಾನದ ಬುದ್ಧಿಯನ್ನರಿತು, "ತಂದೆಗೆ ಆಪತ್ತು ಸಂಭವಿಸಿದಾಗ, ಜ್ಯೇಷ್ಠಪುತ್ರನು ಅವೆಲ್ಲವನ್ನೂ ಸಹಿಸಿಕೊಂಡು ಆತನನ್ನುಳಿಸುವುದು ಲೋಕರೂಢಿಯಾಗಿದೆ. ಆದುದರಿಂದಲೇ ಇಂದು ನಾನು ಹೋಗುವೆನು" ಎಂದು ಪುನಃ ತಂದೆಯನ್ನು ಬೇಡಿದನು. ಆಗ ತಂದೆಯು "ಜೀವನದ ಸಾಧನ"ವಾದ ಹಿರಿಯಮಗನನ್ನು ಬಿಟ್ಟುಕೊಡಲಾರೆನೆನ್ನಲು, ಸತಿಯೂ ಸಹ ತನ್ನ ಮುದ್ದಿನ ಕುವರ ತೃತೀಯನನ್ನು ಬಿಟ್ಟುಕೊಡಲಾರೆನೆಂದಳು. ಆಗ ಮಧ್ಯಮನು (ದ್ವಿತೀಯ) ಮುಂದೆ ಬಂದು "ತಂದೆತಾಯಿಗಳೇ! ಸೋದರರೇ! ನಿಮಗೆಲ್ಲರಿಗೂ ಅನಿಷ್ಟನಾದ ನಾನು ಯಾರಿಗೆ ಪ್ರಿಯನಾದೇನು? ಇಂದು ನನ್ನ ಈ ನಶ್ವರ ಜೀವನ ಪಾವನವಾಯಿತು. ಗುರು-ಹಿರಿಯರ ಅಸುಗಳಿಗೆ ಬದಲಾಗಿ ನನ್ನ ಪ್ರಾಣವನ್ನು ಬಲಿಗೊಡಲು ಧನ್ಯನಾಗುವೆನು.

ತಂದೆತಾಯಿಗಳ ಮತ್ತು ಬಂಧುಬಳಗದ ಸ್ನೇಹವು ಎಷ್ಟು ಪ್ರಿಯವಾದುದು ? ಆ ಪ್ರೇಮವೇ ವಿಶ್ವದಾದರ್ಶವಲ್ಲವೇ ? ಆ ಪ್ರೇಮವನ್ನು ಚಿರಂತನವಾಗಿರಿಸಲು ಯಮರಾಯನೊಡನೆ ಹೊಂದುವ ಸ್ನೇಹ ದುರ್ಲಭವಾದುದಲ್ಲವೇ ?" ಎನ್ನುತ್ತಾ ಪ್ರೀತಿಯಿಂದ ತಂದೆತಾಯಿಗಳಿಗೂ, ಹಿರಿಯ ಅಣ್ಣನಿಗೂ ನಮಸ್ಕರಿಸಿದನು. ಅವರೆಲ್ಲರೂ ಅವನನ್ನು ಹರಸಿ ಆಶೀರ್ವದಿಸಿದರು.

ಮಗನನ್ನು ಅಗಲುವುದರಿಂದಾಗುವ ದುಃಖಾಧಿಕ್ಯವನ್ನು ಅನುಭವಿಸಿದ ವೃದ್ಧನು ದ್ವಿತೀಯ ಪುತ್ರನ ತಲೆಯ ಮೇಲೆ ಕೈಯನಿಟ್ಟು, "ನಮ್ಮೆಲ್ಲರ ಪ್ರಾಣಕ್ಕೆ ಬದಲಾಗಿ ನಿನ್ನಸುವನ್ನು ದಾನಮಾಡಿದ ಗುರುವತ್ಸಲನೇ ! ಆತ್ಮನನ್ನು ತಿಳಿದಂತಹವರಿಗೂ ಸಿಗಲಾರದ ಬ್ರಹ್ಮಲೋಕ ನಿನಗೆ ಸಿದ್ಧಿಸಲಿ" ಎಂದು ಆಶೀರ್ವದಿಸಿದನು. ಈ ದೃಶ್ಯವನ್ನು ಕಂಡ ಘಟೋತ್ಕಚನು ಕೂಡ, "ಈ ಬ್ರಾಹ್ಮಣ ವಟುವಿಗೆ ಸ್ವಜನರಲ್ಲಿ ಎಷ್ಟು ವಾತ್ಸಲ್ಯವಿದೆಯಪ್ಪಾ !" ಎಂದು ಅಚ್ಚರಿಯಿಂದ ಮೆಚ್ಚಿಕೊಂಡನು. ಈ ರೀತಿಯಲ್ಲಿ ತನ್ನ ಸ್ವಂತ ಜೀವನವನ್ನೇ ಇನ್ನೊಬ್ಬರ ಜೀವಕ್ಕಾಗಿ, ಅವರ ಏಳಿಗೆ ಮತ್ತು ಉಳಿವಿಗಾಗಿ, ದಾನಮಾಡಿದ ಮಧ್ಯಮನು ವಿಶ್ವದ ಆದರ್ಶ ವಿಪ್ರಬಾಲಕನಲ್ಲವೇ ? "ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು" ಎಂಬ ನಾಣ್ಣುಡಿಯಂತೆ ಚಿಕ್ಕ ಬಾಲಕನಾದರೂ ತನ್ನ ಜೀವದಳಿವನ್ನು ಯೋಚಿಸಿದ ಮಧ್ಯಮನಿಗೆ ಈ ಗುಣ ಹೊನ್ನ ಕಳಶವಲ್ಲವೇ ?

ಇವನಲ್ಲಿ ಈ ತ್ಯಾಗಬುದ್ಧಿಯನ್ನು ಉಕ್ಕಿಸಿದ್ದು ಯಾವುದು ?
ಆ ಬ್ರಾಹ್ಮಣ ಕುಟುಂಬದ ಸ್ವಜನವಾತ್ಸಲ್ಯ ತಾನೇ ?

—ಜೆ. ಎಸ್. ಮೋಹನರಾವ್
(Pu.C.,P.)

---

# ಘಟೋತ್ಕಚನ ರೂಪ ವೈಭವ

ಕತ್ತಲೆಯನ್ನು ಚೆಲ್ಲುತ್ತಿರುವ ಕೋಟೆಯಂತೆ ಅಡ್ಡವಾಗಿ. ಬೆಟ್ಟಗಳು ದಿಕ್ಕು ದಾರಿಯನ್ನೇ ಅಡ್ಡಗಟ್ಟಿವೆ ; ಬಗೆಬಗೆಯ ಪಕ್ಷಿಗಳು, ಬಗೆಬಗೆಯ ಮೃಗಗಳ ಸಮೂಹವು, ಈ ಅಡವಿಯ ಗಡಣದಲ್ಲಿ ಅಡಗಿವೆ. ಇಂತಹ ಗೊಂಡಾರಣ್ಯ

ದಲ್ಲಿ ವೈರವನ್ನೇ ಕಂಡರಿಯದ ಒರ್ವ ಬ್ರಾಹ್ಮಣನು ಪತ್ನೀಪುತ್ರರಿಂದ ಕೂಡಿ ಬರುತ್ತಿರುವನು. ಪಾಂಡವ ಮಧ್ಯಮನ ಮಗನಾಗಿ, ಹಿಡಿಂಬೆ ಎಂಬ ಅರಣಿಯಲ್ಲಿ ಹುಟ್ಟಿದ ರಾಕ್ಷಸಾಗ್ನಿಯು ಇವರುಗಳಿಗೆ ಕಷ್ಟವನ್ನುಂಟುಮಾಡಿದ್ದಾನೆ. ಆ ರಾಕ್ಷಸನು ಬೆಂಬಿಡದೆ ಬರುತ್ತಿರಲು, ತರುಣರಾದ ಮಕ್ಕಳನ್ನೂ, ಸತಿಯನ್ನೂ ಕೂಡಿರುವ ಬ್ರಾಹ್ಮಣನು ಕಳವಳಕ್ಕೆ ಸಿಕ್ಕಿದವನಾಗಿ, ಹುಲಿಯು ಹಿಂದೆ ಬರುತ್ತಿರುವಾಗ ಯಾವ ರೀತಿಯಾಗಿ ಒಂದು ವೃಷಭವು ಹಸುವನ್ನೂ ಕರುಗಳನ್ನೂ ಜೊತೆಗೊಂಡು ಭಯದಿಂದ ಓಡುತ್ತದೆಯೋ ಆ ರೀತಿ ದಿಕ್ಕುಕಾಣದವನಾಗಿರುವನು. ಆಗ ವೃದ್ಧನು ಅವನನ್ನು ನೋಡಿ—

"ಇವನ ಕೂದಲುಗಳಾದರೋ ಸೂರ್ಯನ ಕಿರಣಗಳು ಹರಡಿರುವಂತೆ ಹರಡಿಕೊಂಡಿವೆ. ಥಳಥಳನೆ ಹೊಳೆಯುತ್ತಿರುವ ಎರಡು ದೊಡ್ಡ ಕೆಂಗಣ್ಣುಗಳು, ಅವುಗಳ ಮೇಲೆ ದೊಡ್ಡದಾದ ಗಂಟಿಕ್ಕಿದ ಹುಬ್ಬು. ಕಂಠಸೂತ್ರದಿಂದ ಕೂಡಿ ಮಿಂಚುತ್ತಿರುವ ಕಪ್ಪಾದ ಮೋಡದಂತೆ ಇರುವನು. ಪ್ರಳಯ ಕಾಲದ ಹರನ ಪ್ರತಿಮೆಯಂತೆ ಕಾಣುತ್ತಿರುವನು" ಎಂದು ಹೇಳಲು, ಪ್ರಥಮನು—

"ಇವನ ಎರಡು ಕಣ್ಣುಗಳು ಎರಡು ಗ್ರಹಗಳಂತೆ ಕಾಣುತ್ತಿವೆ; ಹೊಂಬಣ್ಣದ ಬೆಂಕಿಯ ಜ್ವಾಲೆಯಂತಿರುವ ಕೂದಲು, ವಿಶಾಲವಾಗಿ ಬೆಳೆದು ಉಬ್ಬಿರುವ ಎದೆ, ಉಟ್ಟಿರುವ ಪಟ್ಟೆ ಪೀತಾಂಬರ, ಕತ್ತಲೆಯನ್ನೆಲ್ಲಾ ಕೂಡಿಸಿದಂತಿರುವ ಕಪ್ಪಾದ ಮೈಬಣ್ಣ, ಬೆಳ್ಳನೆಯ ಎರಡು ಕೋರೆಗಳು. ಇವನಾದರೋ ಚಂದ್ರಲೇಖೆಯನ್ನೆ ಮುಸುಕಿ ಮರೆಮಾಡಿಬಿಡುವಂತಹ ಹೊಸದಾದ ಮೋಡದಂತೆ ಕಾಣಿಸುತ್ತಾನೆ," ಎಂದು ವರ್ಣಿಸಿದನು. ದ್ವಿತೀಯನು,—"ಅಪ್ಪಾ, ಇವನ ಕೋರೆದಾಡೆಗಳು ಆನೆಯ ಕೊಂಬಿನಂತೆ ಇವೆ. ಇವನ ತೋಳುಗಳು ಆನೆಯ ಸೊಂಡಿಲಿಗೆ ಸಮವಾಗಿವೆ. ಇವನ ಮೂಗು ನೇಗಿಲಿನಂತೆ ಮುಂದಕ್ಕೆ ಬಂದಿದೆ. ಕಪ್ಪಾದ ಮೋಡದಂತೆ ಇವನ ಮೈಬಣ್ಣ ಹೊಳೆಯುತ್ತಿದೆ. ಹೋಮ ಕುಂಡದಲ್ಲಿ ಅಗ್ನಿಜ್ವಾಲೆ ಯಾವ ರೀತಿಯಾಗಿ ಆಹುತಿಯನ್ನುಕೊಂಡು ಉರಿಯುತ್ತಿರುತ್ತದೆಯೋ ಆ ರೀತಿಯಾಗಿ ಹೊಳೆಯುತ್ತಿರುವನು. ತ್ರಿಪುರನ ಸಂಹಾರ ಕಾಲದಲ್ಲಿ ರೋಷಾವೇಶದಿಂದ ಎದ್ದ ಶಂಕರನ ಕೋಪವು ಯಾವ ರೀತಿಯಾಗಿತ್ತೋ ಆ ರೀತಿಯಾಗಿ ಇವನು ತನ್ನ ರೌದ್ರತೆಯನ್ನು ತೋರುತ್ತಿದ್ದಾನೆ" ಎಂದು ವರ್ಣಿಸಿದನು. ತೃತೀಯನು,—

"ನಮ್ಮನ್ನು ಪೀಡಿಸುತ್ತಿರುವ ಇವನು, ಗಿರಿಗಳಿಗೆ ವಜ್ರಾಯುಧ

ದಂತೆಯೂ, ಪಕ್ಷಿಗಳಿಗೆ ಗಿಡಗನಂತೆಯೂ, ಮೃಗಗಳಿಗೆ ಸಿಂಹದಂತೆಯೂ, ನಮಗೆ ಮೃತ್ಯುವಾಗಿ ಬಂದಿದ್ದಾನೆ" ಎಂದನು.

ಇವರುಗಳು ಹೀಗೆ ವರ್ಣಿಸಿದರೆ, ಇವನನ್ನು ಕಂಡ ಭೀಮನೂ ಸಹ, "ಯಾರಿವನು! ಸಿಂಹದಂತಹ ಕ್ರೂರವಾದ ಮುಖ, ಸಿಂಹದಂತೆಯೇ ಕೋರೆಗಳು, ಜೇನಿನಂತಹ ಕಣ್ಣು, ಕಂದು ಬಣ್ಣದ ಹುಬ್ಬು, ಗಿಡಗನಂತಹ ಮೂಗು, ಆನೆಯ ಕಪೋಲಗಳಿಗೆ ಸಮವಾಗಿರುವ ಕಪೋಲಗಳು, ಸ್ನಿಗ್ಧ ಗಂಭೀರ ರವ, ನಿಡಿದಾಗಿ ಬೆಳೆದು ಕೆದರಿಕೊಂಡಿರುವ ಕೂದಲು, ಉಬ್ಬಿಕೊಂಡು ಮುಂದಕ್ಕೆ ಬಂದು ಹರಡಿರುವ ಎದೆ, ವಜ್ರದಷ್ಟು ಬಲವಾಗಿರುವ ನಡುವು, ಮಾಂಸಖಂಡಗಳಿಂದ ಪುಷ್ಟವಾದ ಹೆಗಲು, ಬಹುಬಿಗುಪಾಂತ ಸಿಡುದೋಳು, ಮದ್ದಾನೆಗಳ ಹಾಗೂ ಗೂಳಿಗಳ ನಡಗೆಯನ್ನು ಹೋಲುವ ನಡಗೆ. ಇವನಾದರೋ ಸಾಮಾನ್ಯನಲ್ಲ; ಪರಾಕ್ರಮಶಾಲಿಯಂತೆ ಕಾಣುತ್ತಾನೆ. ಇವನು ರಾಕ್ಷಸಿಯ ಮಗನಲ್ಲದೆ ಬೇರೆಯವನಲ್ಲ. ಆದರೂ ಇವನು ಯಾವನೋ ಲೋಕವೀರನ ಮಗನೇ ಸರಿ, ಇದಕ್ಕೆ ಸಂದೇಹವಿಲ್ಲ" ಎಂದು ಇವನ ರೂಪ ವೈಭವವನ್ನು ಹೊಗಳುತ್ತಾನೆ.

ಈ ಎಲ್ಲ ವರ್ಣನೆಗಳಿಂದಲೂ ಹಿಡಿಂಬಾಪುತ್ರ ಘಟೋತ್ಕಚನ ರುದ್ರ ಮನೋಹರವಾದ ರೂಪವೈಭವದ ಚಿತ್ರವು ಮೂಡಿ ಕಂಗೊಳಿಸುತ್ತದೆ.

—ಎನ್. ರಾಜು
(Pu.C·M.)

---

# ಭೀಮ ಘಟೋತ್ಕಚರ ಕಲಹ

ಈ ಭಾಗದಲ್ಲಿ ನಾವು ಭಾಸನ ನಾಟಕಕೌಶಲ್ಯ ಅನುರಣಿತವಾಗಿರುವುದನ್ನು ನೋಡಬಹುದು. ಪಾಂಡವರ ಶಕ್ತಿ ಬೆಳೆಯುತ್ತಿತ್ತೆಂಬುದಕ್ಕೂ, ಘಟೋತ್ಕಚನೂ ಭೀಮಸೇನನಷ್ಟೆ ಪರಾಕ್ರಮಶಾಲಿ ಎನ್ನುವುದಕ್ಕೂ, ಅಥವಾ ಹಿಡಿಂಬೆಯು ಆ ವನದಲ್ಲಿ ಪಾಂಡವರಿರುವರೆಂದೂಹಿಸಿ ಪುನಃ ಭೀಮಸೇನನ ಭೇಟಿಮಾಡಲು ತನ್ನ ಮಗನನ್ನು ಒಬ್ಬ ಮನುಷ್ಯನನ್ನು ಹಿಡಿತರಲು ಕಳುಹಿಸಿರಬೇಕೆಂದೂ

ಊಹಿಸುವುದಕ್ಕೂ ಇಲ್ಲಿ ಸನ್ನಿವೇಶ ಕಲ್ಪಿತವಾಗಿದೆ; ಅಲ್ಲದೆ, ಭೀಮಸೇನನು ಅಲ್ಲಿಗೆ ಆಗಮಿಸಿದ ಪ್ರಮೇಯ ಹೇಗೆ ಎಂಬುದನ್ನು ಭಾಸನು ತೋರಿಸಿದ್ದಾನೆ.

ಯಾವಾಗ ಕೇಶವದಾಸನು ವಿಧಿಯಿಲ್ಲದೆ ತನ್ನ ಮಧ್ಯದ ಮಗನನ್ನು ಬಿಟ್ಟುಕೊಡಲು ಒಪ್ಪಿದನೋ ಆಗ ಆ ಕುಲಪ್ರೇಮಿಯಾದ ಹುಡುಗನು ಪರ ಲೋಕಕ್ಕೆ ಹೋಗಲು ಸಿದ್ಧವಾಗಿದ್ದುದರಿಂದ, ಹತ್ತಿರದಲ್ಲಿದ್ದ ಜಲಾಶಯದಲ್ಲಿ ನೀರು ಕುಡಿದುಬರುವುದಾಗಿ ಘಟೋತ್ಕಚನಿಗೆ ಹೇಳಿ ಹೋಗುತ್ತಾನೆ. ಇತ್ತ ಘಟೋತ್ಕಚನು ತಾಯಿಯ ಊಟಕ್ಕೆ ವೇಳೆಯಾಯಿತೆಂದು, ಬ್ರಾಹ್ಮಣಪುತ್ರನ ಹೆಸರು ಮಧ್ಯಮನೆಂದು ಬ್ರಾಹ್ಮಣನ ಹಿರಿಯ ಪುತ್ರನಿಂದ ತಿಳಿದು, ಆ ಕಾಡೆಲ್ಲಾ ಪ್ರತಿಧ್ವನಿತವಾಗುವಂತೆ "ಮಧ್ಯಮಾ, ಮಧ್ಯಮಾ, ಬೇಗ ಬಾ!" ಎಂದು ಕೂಗುತ್ತಾನೆ. ಅಲ್ಲೆ ಅನತಿದೂರದಲ್ಲಿ ವ್ಯಾಯಾಮ ಮಾಡುತ್ತಿದ್ದ ಭೀಮಸೇನನಿಗೆ ಆ ಗಂಭೀರ ಧ್ವನಿಯನ್ನು ಕೇಳಿ ಆಶ್ಚರ್ಯವಾಯಿತು. ತನ್ನ ತಮ್ಮ ಧನಂಜಯನ ಕಂಠದಂತಿದ್ದ ಆ ರವವನ್ನು ಕೇಳಿ ಯಾರೋ ತನ್ನನ್ನು ಕೂಗುತ್ತಿದ್ದಾರೆಂದು ಆ ಧ್ವನಿ ಬಂದಕಡೆ ನಡೆದನು. ಅಲ್ಲಿ ಘಟೋತ್ಕಚ ಕಾಣಿಸಲು, ಅವನ ಗಂಭೀರ ಮುಖಮುದ್ರೆ, ಪುಷ್ಟದೇಹಗಳನ್ನು ಕಂಡು ಅವನು ಮಹಾ ಶೂರನಿರಬೇಕೆಂದು ಊಹಿಸಿದನು. ಘಟೋತ್ಕಚನು ಪುನಃ ಆ ವಟುವನ್ನು "ಮಧ್ಯಮಾ" ಎಂದು ಕೂಗಲು ಪಾಂಡವ ಮಧ್ಯಮನಾದ ಭೀಮಸೇನನು 'ಇಗೋ ಬಂದಿದ್ದೇನೆ" ಎಂದು ಹೋದನು.

ಭೀಮನನ್ನು ನೋಡಿ ಆ ರಾಕ್ಷಸನು ಅವನ ಸುಂದರಾಕೃತಿಯಿಂದ ಅಚ್ಚರಿಗೊಂಡನು. ಭೀಮನು ತಾನೇ 'ಮಧ್ಯಮ'ನೆಂದು ವರ್ಣಿಸುತ್ತಿರುವಾಗ ಬ್ರಾಹ್ಮಣ ಮಧ್ಯಮನು ಪ್ರವೇಶಿಸುತ್ತಾನೆ. ಕೇಶವದಾಸನು ತಮ್ಮ ಕುಲವನ್ನು ಕಾಪಾಡಬೇಕೆಂದು ಬೇಡಿ, ತನ್ನ ವೃತ್ತಾಂತವನ್ನೂ, ಈಗ ಬಂದಿರುವ ವಿಪತ್ತನ್ನೂ ತಿಳಿಸಿದನು. ಭೀಮನು ಆ ರಾಕ್ಷಸನನ್ನು ನಿಗ್ರಹಿಸುವೆನೆಂದು ಹೇಳಿ, ಘಟೋತ್ಕಚನನ್ನು ಕುರಿತು, 'ಬ್ರಾಹ್ಮಣರನ್ನು ಪೀಡಿಸದೆ ಬಿಟ್ಟು ಕಳುಹು" ಎಂದನು. ಆದರೆ, ಬಿಡುವುದಿಲ್ಲ ಎಂದ ಆ ಘಟೋತ್ಕಚನ ದಿಟ್ಟತನವನ್ನು ಕಂಡು, ಅವನು ಎಲ್ಲದರಲ್ಲಿಯೂ ತನ್ನನ್ನೇ ಹೋಲುತ್ತಿದ್ದಾನೆಂದು ಭೀಮನಿಗೆ ಅಭಿಮನ್ಯುವಿನ ನೆನಪಾಯಿತು. ಪುನಃ ಬಿಟ್ಟುಬಿಡೆನ್ನಲು ಘಟೋತ್ಕಚನು, 'ನನ್ನ ತಂದೆ ಬಂದು ಹೇಳಿದರೂ ಬಿಡುವುದಿಲ್ಲ. ತಾಯಿಯ ಆಜ್ಞೆಯಾಗಿದೆ' ಎಂದನು. ಮಾತಿನ ಸಂಭಾಷಣೆಯಿಂದ ಅವನು ಹಿಡಿಂಬೆಯ ಮಗನೆಂದು ತಿಳಿದು, ಆ ಗರ್ವ ಅವನಿಗೆ ತಕ್ಕದ್ದೆಂದು ಭೀಮನು ಶ್ಲಾಘಿಸುನನು.

ಕಡೆಗೆ, ಏನು ಮಾಡಿದರೂ ರಾಕ್ಷಸನು ಆ ಬ್ರಾಹ್ಮಣ ವಟುವನ್ನು ಬಿಡದಿರಲು, ತಾನೇ ಅವನೊಡನೆ ಹೋಗುವುದಾಗಿ ತಿಳಿಸಿ, ವಿಪ್ರನಿಗೆ ತನ್ನ ಮಗನನ್ನು ಕರೆದು ಕೊಳ್ಳುವಂತೆ ಹೇಳಿದನು. ಬ್ರಾಹ್ಮಣ ಮಧ್ಯಮನು ಒಪ್ಪದಿರಲು, ಭೀಮನು ಕ್ಷತ್ರಿಯನಾದ ತಾನು ಪೂಜ್ಯರಾದ ಬ್ರಾಹ್ಮಣರ ದೇಹಕ್ಕೆ ಪ್ರತಿಯಾಗಿ ತನ್ನ ದೇಹವನ್ನು ಕೊಟ್ಟು ಧನ್ಯನಾಗಬೇಕೆಂದು ತಿಳಿಸಿದನು.

ಭೀಮನು ಕ್ಷತ್ರಿಯನೆಂಬುದನ್ನು ಕೇಳಿದ ಘಟೋತ್ಕಚನು, ಅವನನ್ನೇ ಕೊಂದು ತೆಗೆದುಕೊಂಡು ಹೋಗಲು ಭೀಮನನ್ನು ನೀನೇ ಬಂದುಬಿಡು ಎಂದನು. ಭೀಮನು, ಅತಿವೀರ್ಯಬಲಗಳುಳ್ಳ ತಾನು ಒಬ್ಬನನ್ನು ಹಿಂಬಾಲಿಸಿ ಹೋಗುವವನಲ್ಲ, ಶಕ್ತಿಯಿದ್ದರೆ ಕರೆದೊಯ್ಯೆನ್ನಲು ಘಟೋತ್ಕಚನು, 'ನಾನು ಯಾರು ಗೊತ್ತಾಯಿತೋ?' ಎಂದನು. ಭೀಮನು, 'ಬಲ್ಲೆ, ನೀನು ನನ್ನ ಮಗ' ಎಂದನು. ರಾಕ್ಷಸನು, 'ಹೇಗೆ ನಿನ್ನ ಮಗ' ಎನ್ನಲು, ಭೀಮನು, 'ಕ್ಷತ್ರಿಯರು ಪ್ರಜೆಗಳೆಲ್ಲರನ್ನೂ ಮಕ್ಕಳೆಂದೇ ಕರೆಯುತ್ತಾರೆ' ಎಂದನು. ಆಗ ಘಟೋತ್ಕಚನು, 'ಹೆದರಿದವರ ಆಯುಧವನ್ನು ಹಿಡಿದುಬಿಟ್ಟೆಯಲ್ಲಾ!' ಎನ್ನಲು, ಭೀಮನು, ಭಯವೆಂದರೇನೆಂದು ಸತ್ಯವಾಗಿಯೂ ತನಗೆ ತಿಳಿಯ ದೆಂದನು. ಘಟೋತ್ಕಚನು, ಭಯವನ್ನು ತಾನು ಉಪದೇಶಿಸುವುದಾಗಿ ಹೇಳಿ, 'ಆಯುಧವನ್ನು ಹಿಡಿದುಕೋ' ಎನ್ನುವನು. ಆಗ ಭೀಮನು, ತಾನು ಹಿಡಿದುಕೊಂಡೇ ಇರುವೆನೆಂದು ತನ್ನ ಬಲತೋಳನ್ನು ತೋರಿಸುವನು. ಅದು ತನ್ನ ತಂದೆ ಭೀಮಸೇನನಿಗೆ ಮಾತ್ರ ಒಪ್ಪುವುದೆನ್ನಲು, ಭೀಮನು,'ಯಾರಯ್ಯಾ ನಿಮ್ಮ ತಂದೆ?' ಎಂದು ಕೇಳಿದನು. ರಾಕ್ಷಸನು, ಅವನು ಇಂದ್ರ, ವಿಷ್ಣು, ಎಲ್ಲರಿಗೂ ಸಮವೆನ್ನಲು, ಭೀಮನು ಅದನ್ನು ನಿರಾಕರಿಸಿದನು. ಅದರಿಂದ ಕೋಪಗ್ರಸ್ತನಾದ ಘಟೋತ್ಕಚನು ಒಂದು ದೊಡ್ಡ ಮರವನ್ನು ಕಿತ್ತು ಹೊಡೆಯುತ್ತಾನೆ. ಭೀಮನು ಕದಲುವುದಿಲ್ಲ. ಅನಂತರ ಬೆಟ್ಟದ ಕೋಡು ಗಲ್ಲನ್ನು ಕಿತ್ತು, 'ನಾಸಿಟ್ಟ ಕೋಡುಗಲ್, ನಿನ್ನಸುವ ಸೆಳೆದೊಯ್ವುದು' ಎಂದು ಹೊಡೆಯುತ್ತಾನೆ. ಭೀಮನು ಅದಕ್ಕೂ ಸಗ್ಗದಿರಲು ಅಚ್ಚರಿಗೊಂಡ ಘಟೋತ್ಕಚನು ಭೀಮಸೇನನ ಮಗನಾದ ತಾನು ಮಲ್ಲಯುದ್ಧದಲ್ಲಿ ಪ್ರವೀಣ ನೆಂದು ತಿಳಿಸುವನು. ಇಬ್ಬರೂ ಮಲ್ಲಯುದ್ಧ ಮಾಡುತ್ತಾರೆ. ಆಗ ಘಟೋತ್ಕಚನು, ಭೀಮನನ್ನು ಪಟ್ಟಿಗೆ ಸಿಕ್ಕಿಸಿಕೊಂಡು, ಈಗ ತನ್ನ ಬಲವನ್ನು ಹೇಗೆ ಮೀರಿ ನಡೆವೆ ಎನ್ನಲು ಪುತ್ರನ ಸಮಬಲವನ್ನು ಕಂಡು ಆನಂದಗೊಂಡ ಭೀಮನು, ತನ್ನಲ್ಲೆ, "ಸುಯೋಧನಾ! ನಿನ್ನ ಶತ್ರು

ಪಕ್ಷ ಬೆಳೆಯುತ್ತಿದೆ, ರಕ್ಷಣೆ ಮಾಡಿಕೋ!" ಎಂದು ತನ್ನಲ್ಲೇ ಹಿಗ್ಗಿ, ಎಚ್ಚರ ವಾಗಿರೆಂದು ರಾಕ್ಷಸನಿಗೆ ತಿಳಿಸಿ, ಪಟ್ಟನ್ನು ಬಿಡಿಸಿಕೊಳ್ಳುವನು.

ಕೊನೆಗೆ, ಘಟೋತ್ಕಚನಿಗೆ ದಿಕ್ಕುತೋರದಂತಾಗಿ, ಮಾತೃಪ್ರಸಾದ ದಿಂದ ದೊರಕಿದ ಮಾಯಾಪಾಶದಿಂದ ಭೀಮನನ್ನು ಕಟ್ಟುತ್ತಾನೆ. ಭೀಮನು ಈಶ್ವರಾನುಗ್ರಹದಿಂದ ದೊರೆತ ಮಾಯಾಪಾಶ ಮೋಕ್ಷಮಂತ್ರದಿಂದ ಅದನ್ನು ಬಿಡಿಸಿಕೊಳ್ಳುತ್ತಾನೆ. ಅದನ್ನು ನೋಡಿ ಘಟೋತ್ಕಚನು ಹಿಂದಿನ ಒಪ್ಪಂದ ದಂತೆ ಬರಬೇಕೆನ್ನಲು ಭೀಮನು ಅವನನ್ನು ಅನುಸರಿಸಿ ನಡೆಯುವನು.

ಹೀಗೆ, ಭೀಮ ಘಟೋತ್ಕಚರ 'ಮಧ್ಯಮ' ನಿಮಿತ್ತವಾದ 'ವ್ಯಾಯೋಗ'ವು (ಕಲಹವು) ಹಿಡಿಂಬೆಯ ಸಮ್ಮುಖದಲ್ಲಿ ಅವರ ಸಂತಸದ ಸಮಾಗಮಕ್ಕೆ ಕಾರಣವಾಗುತ್ತದೆ.

—ಸಿ. ತಮ್ಮಣ್ಣ
(Pu.C.,Q.)

---

# ಸಿದ್ಧರಾಮನ ಜನನ ಮತ್ತು ಬಾಲ್ಯ

ಕಾರಣಪುರುಷನಾದ ಸಿದ್ಧರಾಮನ ಜನನ ಮತ್ತು ಬಾಲ್ಯಗಳು ಸಾಮಾನ್ಯ ರೀತಿಯವಾಗಿರದೆ, ಬೇರೊಂದು ವಿಧವಾಗಿ ಪ್ರತ್ಯೇಕವಾದ ವೈಶಿಷ್ಟ್ಯವನ್ನು ಹೊಂದಿದ್ದಿತು.

ಸಿದ್ಧರಾಮನು ಕಾಮ ರಾಗಗಳಿಂದ ಕಲುಷಿತವಾದ ದೇಹಗಳಲ್ಲಿ ಜನಿಸದೆ, ಶಿವಭಕ್ತರೂ, ಧರ್ಮನಿರತರೂ, ರಾಗರಹಿತವಾದ ದೇಹವುಳ್ಳವರೂ ಆದ ಮುದ್ದ ಗೌಡ ಸುಗ್ಗವ್ವೆಯರ ದೇಹಗಳಲ್ಲಿ, ಅವರ ಇಳಿವಯಸ್ಸಿನಲ್ಲಿ ಜನಿಸಿದನು. ಇದು ಸಾಮಾನ್ಯ ಜನರಿಗೆ ಆಶ್ಚರ್ಯವನ್ನುಂಟುಮಾಡಿತಾದರೂ, ಸಿದ್ಧರಾಮನ ಜನನ ಉದ್ದೇಶಪೂರ್ವಕವಾಗಿ ಆಗಿತ್ತು. ಅವನು ಮುಂದೆ ಕರ್ಮಯೋಗವನ್ನು ಸಾಧಿಸಲು ಜನಿಸಿದ ವ್ಯಕ್ತಿಯಾಗಿದ್ದನು; ಪವಾಡಪುರುಷನೆನಿಸುವವನಾಗಿದ್ದನು.

ಸಿದ್ಧರಾಮನು ಜನಿಸುವ ಒಂದು ವರ್ಷಕ್ಕೆ ಮೊದಲೇ ಗುರು ರೇವಣರು

ಸುಗ್ಗವ್ವೆಗೆ ಆ ವಿಷಯವನ್ನು ತಿಳಿಸಿದ್ದರು. ಇದು ಸುಗ್ಗವ್ವೆಗೆ ಆಶ್ಚರ್ಯವನ್ನುಂಟು ಮಾಡಿತಾದರೂ, ಮುಂದೆ ತನ್ನ ಉದರದಲ್ಲಿ ಲೋಕಪ್ರಸಿದ್ಧನಾಗುವ ಪುತ್ರನು ಜನಿಸುವನೆಂದು ಕನಸಿನಲ್ಲಿಯೂ ಸುಗ್ಗವ್ವೆಯು ನೆನಸಿರಲಿಲ್ಲ. ಹೀಗಾಗಿ, ಮುಂದೆ ಸಿದ್ಧರಾಮನ ಜನನವು ಕನಸೋ ನನಸೋ ಎನ್ನುವಂತಾಯಿತು ಅವಳ ಪಾಲಿಗೆ.

ಸಿದ್ಧರಾಮನು ಜನಿಸಿದ್ದು ವಿಚಿತ್ರ ರೀತಿಯಲ್ಲಿ. ಅವನು ಜನಿಸಿದಾಗ ಅಳಲೂ ಇಲ್ಲ. ನಗಲೂ ಇಲ್ಲ. ಹುಟ್ಟುವಾಗಲೆ ಅವನು ಗಂಭೀರವಾದ ಮೌನ ಮುದ್ರೆಯನ್ನು ಧರಿಸಿ ಜನಿಸಿದನು. ಇದನ್ನು ಕಂಡು ಸಾಮಾನ್ಯ ಜನರಿಗೆ ಸೋಜಿಗವಾಯಿತು.

ಈ ರೀತಿ ಸಿದ್ಧರಾಮನ ಜನನವು ಇತರ ಸಾಮಾನ್ಯ ಮಕ್ಕಳ ಜನನದಂತೆ ಇರದೆ, ವಿಚಿತ್ರರೀತಿಯಲ್ಲಿದ್ದಿತು.

ಸಿದ್ಧರಾಮನ ಜನನವು ಎಷ್ಟು ವಿಚಿತ್ರವಾಗಿದ್ದಿತೋ ಅಷ್ಟೇ ವಿಚಿತ್ರವಾದ ಅವನ ಬಾಲ್ಯವೂ ಸಹ ಕಳೆದುಹೋಯಿತು. ಅವನು ಯಾವಾಗಲೂ ಗಂಭೀರ ಮುದ್ರೆಯನ್ನು ಧರಿಸಿರುತ್ತಿದ್ದನು. ಯಾರೊಡನೆಯೂ ಆಟವಾಡಲು ಕೂಡ ಹೋಗುತ್ತಿರಲಿಲ್ಲ. ತಂದೆತಾಯಿಗಳನ್ನು ತಿಂಡಿ ಬೇಕೆಂದು ಎಂದೂ ಕೇಳಿದವನಲ್ಲ. ಏನಾದರೂ ಕೊಟ್ಟರೆ ತಿನ್ನುತ್ತಿದ್ದನು, ಇಲ್ಲವಾದರೆ ಸುಮ್ಮನಿರುತ್ತಿದ್ದನು.

ಇದನ್ನು ಕಂಡ ಮುದ್ದಗೌಡ ಸುಗ್ಗವ್ವೆಯರಿಗೆ ದುಃಖವಾಯಿತಾದರೂ, ಒಂದು ಬಗೆಯ ತೃಪ್ತಿಯೂ ಲಭಿಸುತ್ತಿತ್ತು. ಎಂದಾದರೂ ಒಂದು ದಿವಸ ಈ ಮೌನದ ಮೊಟ್ಟೆ ಒಡೆದು ಲವಲವಿಕೆಯಾಗಿ ಗರಿಗೆದರುತ್ತದೆಯೆಂದು ಅವರು ಆಶಿಸುತ್ತಿದ್ದರು. ಆದರೆ ಅವರ ಆಶೆ ನಿರಾಶೆಯಾಯಿತು. ಆಗ ಮುದ್ದಗೌಡನಿಗೆ ಏನೋ ಹೊಳೆದಂತಾಗಿ, ಅವನನ್ನು ದನ ಕಾಯಲು ಹುಡುಗರೊಡನೆ ಕಳುಹಿಸಿದರೆ ಅದೇನಾದರೂ ಫಲಕಾರಿಯಾಗಬಹುದೆಂದು ಭಾವಿಸಿ, ದನಕಾಯಲು ಕಾಡಿಗೆ ಕಳುಹಿಸಿದನು. ಸಿದ್ಧರಾಮನು ದನಗಳನ್ನು ಹೊಡೆದುಕೊಂಡು ಕಾಡಿಗೆ ಹೊರಡುತ್ತಿದ್ದನು; ಆದರೆ ಆ ಕೆಲಸದಲ್ಲಿಯೂ ಸಹ ಅವನದು ಯಾವಾಗಲೂ ಮೌನವೇ. ಹಸುಗಳನ್ನು ಮೇಯಲು ಬಿಟ್ಟು, ಒಂದು ಮರದ ಕೆಳಗೆ ಶಿವಲಿಂಗ ವೊಂದನ್ನು ಇಟ್ಟುಕೊಂಡು ಅದನ್ನು ಯಾವಾಗಲೂ ಪೂಜಿಸುತ್ತಿದ್ದನು. ತಾಯಿ ಕೊಟ್ಟ ತಿಂಡಿಯನ್ನು ಲಿಂಗಕ್ಕೆ ನೈವೇದ್ಯಮಾಡಿ, ಇತರ ಹುಡುಗರೆಲ್ಲರಿಗೂ ಹಂಚುತ್ತಿದ್ದನು. ದೂರದಲ್ಲಿ ಕಾಣುವ ಶ್ರೀಶೈಲದ ಗಿರಿಪಂಕ್ತಿಯನ್ನು ನೋಡಿದಾಗ ಅವನ ಮೈ ಪುಲಕಿತವಾಗುತ್ತಿದ್ದಿತು. ಈ ರೀತಿ ತನ್ನ ಬಾಲ್ಯದಲ್ಲಿಯೇ

ವೈರಾಗ್ಯ ತಾಳಿದ ಸಿದ್ಧರಾಮನಿಗೆ ಸವಣೆಯ ಹೊಲದ ಹತ್ತಿರ ಮಲ್ಲಯ್ಯನ ದರ್ಶನವುಂಟಾಗಿ, ಅವನಿಂದ ಆಕರ್ಷಿತನಾಗಿ, ಶ್ರೀಶೈಲಕ್ಕೆ ಹೊರಟನು. ಹೇಗಾದರೂ ಮಾಡಿ ಮಲ್ಲಯ್ಯನ ದರ್ಶನವನ್ನು ಪುನಃ ಪಡೆಯಬೇಕೆಂದು ನಿರ್ಧರಿಸಿ, ಶ್ರೀಶೈಲಕ್ಕೆ ಹೊರಟು, ಅಲ್ಲಿಯ ಕಲ್ಲಿನ ಲಿಂಗವನ್ನು ಕಂಡು ನಿರಾಶೆಯಿಂದ ತುಂಬಿದವನಾಗಿ, ಮನಸ್ಸಿಗೆ ಬೇಸರವುಂಟಾಗಿ, ಆತ್ಮಹತ್ಯೆ ಮಾಡಿಕೊಳ್ಳೋಣವೆಂದು ರುದ್ರಗಮ್ಮರಿಯ ತುದಿಗೆ ಬಂದಾಗ ಮಲ್ಲಿಕಾರ್ಜುನನ ದರ್ಶನವಾಯಿತು. ಮೊದಲು ಕಲ್ಯಾಣನಗರಕ್ಕೆ ಹೋಗಿ ಚೆನ್ನಬಸವನಿಂದ ದೀಕ್ಷೆಯನ್ನು ಪಡೆದು, ಅನಂತರ ಸೊನ್ನಲಿಗೆಗೆ ಹೋಗಿ ಕರ್ಮಯೋಗವನ್ನು ಸಾಧಿಸಬೇಕೆಂದು ಶಿವನಿಂದ ಸಂದೇಶವನ್ನು ಪಡೆದು ಸಿದ್ಧರಾಮನು ಹಿಂದಿರುಗಿದನು. ಇಂತು, ಶಿವಯೋಗಿಯೂ, ಕರ್ಮಯೋಗಿಯೂ, ಪವಾಡಪುರುಷನೂ, ಕರುಣಾಮೂರ್ತಿಯೂ ಆದ ಸಿದ್ಧರಾಮನ ಅಸಾಧಾರಣ ವ್ಯಕ್ತಿತ್ವವನ್ನು ಸಾರುವ ಅಪೂರ್ವ ಅದ್ಭುತ ಘಟನೆಗಳಿಂದ ಕೂಡಿದ್ದವು ಅವನ ಜನನ ಮತ್ತು ಬಾಲ್ಯ.

—ಆರ್. ಲಕ್ಷ್ಮಯ್ಯ
(Pu.C.,E.)

---

# ಸುಗ್ಗವ್ವೆಯ ಕನಸು ನನಸಾದ ಬಗೆ

ಸುಗ್ಗವ್ವೆ ಸೊನ್ನಲಿಗೆಯ ಮುದ್ದಗೌಡನ ಧರ್ಮಪತ್ನಿ. ಬಹಳ ಕಾಲದವರೆಗೆ ಈ ದಂಪತಿಗಳ ಸಂಸಾರನೌಕೆಯು ಸುಗಮವಾಗಿ ನಡೆದರೂ ಸತ್ಕುಲಪ್ರಸೂತನಾದ, ವಂಶೋದ್ಧಾರಕನಾದ, ಪುತ್ರನು ಮಾತ್ರ ಉದಯಿಸಿರಲಿಲ್ಲ. ಆಗಲೇ ಆ ದಂಪತಿಗಳ ವಯಸ್ಸು ಐವತ್ತಕ್ಕೂ ಮೀರಿತ್ತು. ಈ ಇಳಿವಯಸ್ಸಿನಲ್ಲಿ ಅವರಿಗೆ ಮಕ್ಕಳಾಗುವುದೆಂದರೇನು? ಹೀಗಿರುವಾಗ, ಒಂದು ದಿನ, ಗುರು ರೇವಣಾಚಾರ್ಯರು ತಮ್ಮ ಶಿಷ್ಯರೊಂದಿಗೆ ಸೊನ್ನಲಿಗೆಗೆ ಬಂದಿದ್ದರು. ಇವರು ಸೊನ್ನಲಿಗೆಗೆ ಬರುತ್ತಲೇ ಭಯ ಭಕ್ತಿಯಿಂದ ಪುಲಕಿತರಾದರು. ಇದನ್ನು ಕಂಡ ಶಿಷ್ಯರು ಬೆರಗಾಗಿ ಕಾರಣ ಏನೆಂದು ಕೇಳಲು, ಗುರುಗಳು, " ಸದ್ಯದಲ್ಲೇ ಈ ಸೊನ್ನಲಿಗೆಯಲ್ಲಿ ಅವತಾರ ಪುರುಷನೊಬ್ಬನು ಅವತರಿಸುತ್ತಾನೆ. ಅವನಿಂದ

ಈ ಸೊನ್ನಲಿಗೆ ಪರಮಾತ್ಮನ ವಾಸಸ್ಥಾನವಾಗಿ, ಲಿಂಗದ ಬೀಡಾಗಿ, ಪುಣ್ಯದ ಪುಂಜವಾಗಿ, ಪ್ರಕಾಶಗೊಳ್ಳುತ್ತದೆ" ಎಂದರು.

ಹೀಗೆ ಬಂದ ಗುರುಗಳು ನೇರವಾಗಿ ಸುಗ್ಗವ್ವೆಯ ಮನೆಯನ್ನು ಹೊಕ್ಕರು; ಮತ್ತು ಸುಗ್ಗವ್ವೆಗೆ ನಮಸ್ಕರಿಸಿದರು. ರೇವಣಾಚಾರ್ಯರಂತಹ ಮಹಾತ್ಮರು ತಾವಾಗಿಯೇ ತನ್ನ ಮನೆಗೆ ಬಂದುದ್ದನ್ನು ನೋಡಿ ಸುಗ್ಗವ್ವೆ ಆಶ್ಚರ್ಯಭರಿತಳಾದಳು. ಇವಳ ಸ್ಥಿತಿಯನ್ನು ಅರಿತ ಗುರುಗಳು, "ತಾಯೇ, ಹೆದರಬೇಡ. ನಿನ್ನದು ಪವಿತ್ರವಾದ ಗರ್ಭ. ಭಕ್ತರಿದ್ದೆಡೆಗೆ ಶಿವನು ಹೋಗುತ್ತಾನೆ. ವಿವಾಹದ ಆದರ್ಶವು ಗಂಡಹೆಂಡಿರಿಬ್ಬರ ದೇಹಸಂಬಂಧ ಮಾತ್ರವಲ್ಲ; ಹೃದಯದ ಮಿಲನ, ಆತ್ಮಶಕ್ತಿಯ ಸಂಗಮ; ಪ್ರೇಮವೆ ಅದರ ಸಿದ್ಧಿ. ಸುಖ-ದುಃಖ, ಹಗೆ-ಕೆಳೆ, ಹರುಷ-ವಿಷಾದ, ನಿಂದೆ-ಸ್ತುತಿ, ಹಗಲು-ಇರುಳು, ಮೃದು-ಕಠಿನ ಎಂಬ ಯಾವ ದ್ವಂದ್ವವೂ ಇಲ್ಲದೆ, ಕಾಮವೆಲ್ಲ ಆರಿ ಪ್ರೇಮಮಯವಾದ ನಿನ್ನ ಪವಿತ್ರ ಗರ್ಭಾಂಬುಧಿಯಲ್ಲಿ ಉದಯಾಚಲದಿಂದ ಹುಟ್ಟಿಬರುವ ಸೂರ್ಯನಂತೆ ಅಸಾಮಾನ್ಯ ಶಿಶು ಮೂಡುತ್ತಾನೆ" ಎಂದರು.

ಮೊದಲೇ ಚಕಿತಳಾಗಿದ್ದ ಸುಗ್ಗವ್ವೆ ಈ ಮಾತುಗಳನ್ನು ಕೇಳಿ ಮತ್ತಷ್ಟು ವಿಸ್ಮಿತಳಾದಳು. ಸುಗ್ಗವ್ವೆ ತಾರುಣ್ಯದಾಟಿ, ಪ್ರೌಢತ್ವದ ಎಲ್ಲೆ ಇವನ್ನು ದಾಟಿ ವೃದ್ಧಾಪ್ಯದ ಗಡಿಯೊಳಕ್ಕೆ ಕಾಲಿಟ್ಟಿದ್ದಳು. ಮೈಗೆ ಮುಪ್ಪಿನ ಮುಸುಕು ಕವಿದಿರುವಾಗ, ದೇಹ ಸಡಿಲವಾಗಿರುವಾಗ, ಮಗ ಜನಿಸುವನೇ! ಇದನ್ನು ನಂಬುವುದೆಂತು ? ಹುಟ್ಟುವುದಾದರೆ ಹಿಂದೆಯೇ ಹುಟ್ಟುತ್ತಿದ್ದ—ಎಂದವಳು ಬಲವಾಗಿ ಶಂಕೆಪಟ್ಟಳು.

ಸುಗ್ಗವ್ವೆಯ ಮನೋಭಾವವನ್ನು ಆಕೆಯ ಮುಖಭಂಗಿಯಿಂದಲೇ ಗ್ರಹಿಸಿದ ರೇವಣಾಚಾರ್ಯರು ಅವಳ ಮನಸ್ಸಿನ ಸಂದೇಹವನ್ನು ಸುಲಭವಾಗಿ ಬಿಡಿಸಿದರು: "ತಾಯಿ, ತಾರುಣ್ಯದ ರಾಗ ದ್ವೇಷ ಕಾಮಕಲುಷಿತವಾದ ಶರೀರದಲ್ಲಿ ಹುಟ್ಟದೆ, ಆ ಕಾಮದ ಕಾವೆಲ್ಲ ಆರಿ ಪ್ರೇಮದಿಂದ ಪಕ್ವವಾಗಿರುವ ಈ ಅಪರ ವಯಸ್ಸಿನ ಶರೀರದಲ್ಲಿ ಜನಿಸುವ ಮಗು ನಿಜವಾಗಿ ಪವಿತ್ರಾತ್ಮನಾಗುತ್ತಾನೆ. ಆದರೆ ಅವನು ಎಲ್ಲರಂತೆ ಇರುವುದಿಲ್ಲ; ಅಸಾಮಾನ್ಯನಾಗಿರುತ್ತಾನೆ. ಆದರೆ ಮಗ ಹೀಗಾದನಲ್ಲಾ ಎಂದು ಪಶ್ಚಾತ್ತಾಪ ಪಡಬೇಡ. ಹೆಸರನ್ನು ಮಾತ್ರ 'ಸಿದ್ಧರಾಮ' ಎಂದಿಡು" ಎಂದು ಮತ್ತೊಮ್ಮೆ ರೇವಣರು ಸುಗ್ಗವ್ವೆಗೆ ನಮಸ್ಕಾರ ಮಾಡಿ, ಆನೆಯ ಬಳಗದೊಂದಿಗೆ ನಡೆಯುವ ಸಲಗದಂತೆ, ತಮ್ಮ ಶಿಷ್ಯಪರಿವಾರದೊಡನೆ ಗಂಭೀರವಾಗಿ ಶಿವಮಂತ್ರವನ್ನು ಜಪಿಸುತ್ತಾ ಮುಂದೆ ನಡೆದರು.

ಬೇರೆ ಹೆಂಗಸರಾಗಿದ್ದರೆ ಅದನ್ನು ಒಂದು ಪವಾಡ ಎಂದು ಗುಲ್ಲೆಬ್ಬಿಸಿ ಸುಲಭ ಕೀರ್ತಿ ಗಳಿಸುವುದರಲ್ಲಿ ಮಗ್ನರಾಗುತ್ತಿದ್ದರು. ಸುಗ್ಗವ್ವೆ ಹಾಗೆ ಮಾಡಲಿಲ್ಲ ಗುರುವಚನದ ಫಲಸಿದ್ಧಿಯ ಮುಗ್ಧ ನಿರೀಕ್ಷೆಯಲ್ಲಿ ದಿನಗಳನ್ನು ಎಣಿಸುತ್ತಿದ್ದಳು

ಇತ್ತ ರೇವಣರು ಹೋದ ಒಂದು ವರ್ಷದವರೆಗೆ ಪುತ್ರಜನನದ ಕನಸನ್ನು ಸುಗ್ಗವ್ವೆ ಕಾಣುತ್ತಿದ್ದಳು. ಈಗ ರೇವಣರು ಬಂದು ಹೋದದ್ದು ಒಂದು ಕನಸಿನಂತೆ ಆಕೆಗೆ ಭಾಸವಾಯಿತು. ಒಂದು ವರ್ಷದನಂತರ ರೇವಣರು ಹೇಳಿದ ಮಾತು ಪುನರ್ಧ್ವನಿತವಾಯಿತು. ಆ ವೇಳೆಗೆ ದೇವಕನ್ನಿಕೆಯರು ಬಂದು ಹುಟ್ಟಿದ ಮಗುವನ್ನು 'ಸಿದ್ಧರಾಮಾ' ಎಂದು ಕರೆದರು ಎಂಬ ಭಾವನೆಯು ಆಕೆಯ ಮನಸ್ಸಿನಲ್ಲಿ ಮೂಡಿತು. ಭಾವನಾಲೋಕದ ಕನಸಿನ ಸವಿಯನ್ನು ಪುನಃ ಪುನಃ ಸವಿದು ಸೋಜಿಗದ ಕಡಲಲ್ಲಿ ತೇಲುತ್ತಿದ್ದ ಸುಗ್ಗವ್ವೆಯನ್ನು ಎಚ್ಚರಿಸಿತು ಒಂದು ಹೆಣ್ಣುಧ್ವನಿ. ಸುಗ್ಗವ್ವೆಯು ಏನೂ ಅರಿಯದವಳಂತೆ ಥಟ್ಟನೆ ಕಣ್ಣರಳಿಸಿ ನೋಡಿದಳು. ಎಲ್ಲಾ ಶೂನ್ಯ; ಒಂದೇ ಹೊನ್ನ ಕಿರಣ ಮನೆಯ ಸೂರಿನ ಸಂದಿಯಿಂದಿಳಿದು ತನ್ನ ಬದಿಯ ಗೋಡೆಯ ಮೇಲೆ ಬೆಳ್ಳಿಯ ಕೋಲಿನಂತೆ ನಿಂತಿತ್ತು. ದಾರಿದ್ರ್ಯದಲ್ಲಿ ಬಚ್ಚಿಟ್ಟುಕೊಂಡ ಸಿರಿವಂತಿಕೆಯಂತೆ, ಹರುಕು ಮೋಡಗಳ ನಡುವಣ ಬಾಲಚಂದ್ರನಂತೆ, ಮೊರದಲ್ಲಿ ಹರುಕು ಸೀರೆಯ ನಡುವೆ ಮಲಗಿರುವ ತನ್ನ ಬೆಳ್ಳಿಯ ಗೊಂಬೆ—"ನೀನು ಕಾಣುತ್ತಿರುವುದು ಕನಸಲ್ಲ" ಎಂದು ಸಾರುತ್ತಿತ್ತು. ಸುಗ್ಗವ್ವೆಯ ಕನಸು ನನಸಾಗಿತ್ತು.

—ಬಿ. ಆರ್. ಚೆನ್ನಪ್ಪಗೌಡ

(Pu. C., ೯.)

---

# ಕರ್ಮಯೋಗ ಸಿದ್ಧಿ

'ಕಾಯಕವೇ ಕೈಲಾಸ' ಎನ್ನುವುದು ಸಿದ್ಧರಾಮನ ಬದುಕಿನಲ್ಲಿ ಮೂರ್ತಿಮತ್ತಾಗಿರುವುದನ್ನು ನಾವು ಕಾಣಬಹುದು. ಸಿದ್ಧರಾಮನ ಪ್ರಥಮ ಶಿಷ್ಯ ಕಲ್ಲಯ್ಯನು, "ಅಣ್ಣನವರೇ, ನಾವು ಮಾಡಬೇಕಾದುದೇನು?" ಎಂದು ಒಮ್ಮೆ ಕೇಳಿದನು. ಅದಕ್ಕೆ ಅವರು, "ಅದೇ, ಕರ್ಮಯೋಗ, ನಾವೂ ನೀವೂ ಮಾಡ

ಬೇಕಾದುದು " ಎಂದರು. ಕಲ್ಲಯ್ಯನು ಕರ್ಮಯೋಗದ ಸ್ವರೂಪವನ್ನು ಕೇಳಲು, ಸಿದ್ಧರಾಮನು, " ಕರ್ಮ ಎಂದರೆ ಕಾಯಕ. ಪ್ರತಿಯೊಬ್ಬನೂ ದೇಹ ಶ್ರಮಿಸಿ ಕೆಲಸ ಮಾಡಬೇಕು. ಆ ಕಾಯಕವೇ ಕರ್ಮಯೋಗ, ಕರ್ಮವೇ ಪೂಜೆ, ಪೂಜೆಯೇ ಕೆಲಸ " ಎಂದು ಹೇಳಿದರು. ಪುನಃ ಕಲ್ಲಯ್ಯನು, " ಹಾಗಾದರೆ, ಪೂಜೆ ಪ್ರಾರ್ಥನೆ ಇವುಗಳನ್ನು ಪ್ರತ್ಯೇಕ ಮಾಡುವ ಆವಶ್ಯಕತೆ ಇಲ್ಲವೆ ?" ಎಂದು ಕೇಳಲು ಸಿದ್ಧರಾಮನು, " ಮಾಡುವುದೆಲ್ಲವೂ ಭಗವಂತನ ಸೇವೆಯೆಂದು ಮಾಡಿದರೆ ಅದರ ಅಗತ್ಯವಿಲ್ಲ. ಪ್ರತ್ಯೇಕ ಪೂಜೆ ಆವಶ್ಯಕವಿಲ್ಲ. ಪೂಜೆ, ಜಪ, ತಪ ಇತ್ಯಾದಿಗಳ ಹೊರರೂಪೂ ಕೂಡ ಕರ್ಮ. ಎಲ್ಲವೂ ಭಗವಂತನ ಸ್ವರೂಪವೇ ಆಗಿರುವಾಗ, ಮಾಡುವ ಕರ್ಮವೂ ಪೂಜೆಯೇ ಆಗದೆ ಇನ್ನೇನು ಆದೀತು ? ಈ ಜಗತ್ತನ್ನೇ ನೋಡಿ, ಅದು ಒಂದು ಗಳಿಗೆಯಾದರೂ ಕರ್ಮ ಮಾಡದೆ ಇರುತ್ತದೆಯೇ ?" ಎಂದು ವಿವರಿಸಿದನು. ಮುಂದುವರಿದು, " ಕರ್ಮಯೋಗವೇ ಲೋಕಹಿತ ಸಾಧನೆಗೆ ಶ್ರೇಷ್ಠವಾದ ದಾರಿ " ಎಂದನು. ಅಲ್ಲದೆ, ಮಲ್ಲಿಕಾರ್ಜುನನಿಂದ ತನಗೂ ಅದೇ ಅಪ್ಪಣೆಯಾಗಿದೆ ಎಂದೂ ತಿಳಿಸಿದನು.

ಸಿದ್ಧರಾಮನು ಅಲ್ಲಿ ಮೂಡಿದ್ದ ಲಿಂಗಕ್ಕೆ ಒಂದು ದೇವಾಲಯ ಕಟ್ಟಿಸಲು, ಆ ಪ್ರದೇಶವನ್ನು ಸ್ವಚ್ಛಗೊಳಿಸುವುದರಲ್ಲಿ ಶಿಷ್ಯರೊಂದಿಗೆ ತಾನೂ ಅಗೆಯುತ್ತಿದ್ದಾನೆ. ಕಲ್ಲಯ್ಯನ ಮನದಲ್ಲಿ ಆ ದೇವಾಲಯ ನಿರ್ಮಾಣಕ್ಕೆ ಸುಮಾರು ಹಣ ಬೇಕಾಗುತ್ತದೆ. ಈ ಬಡತನದ ತವರೂರಿನಲ್ಲಿ ಯಾರು ಅಷ್ಟು ಸಹಾಯ ನೀಡುತ್ತಾರೆ ? ಎಂಬ ಸಂದೇಹ. ಆದರೆ ಅಣ್ಣನವರು, ಅದರ ಯೋಚನೆಯೇ ಇಲ್ಲದೆ, ತಾವೂ ಗುದ್ದಲಿ ಹಿಡಿದು ಕೆಲಸ ಮಾಡುತ್ತಿದ್ದಾರೆ. ಕಲ್ಲಯ್ಯ ತಲೆಯೆತ್ತಿ ಶಿಷ್ಯವೃಂದವನ್ನು ನೋಡಿ, ತಾನು ಮೊದಲು ಬಂದು ಸೇರಿದ ಪವಾಡವನ್ನು ನೆನೆಯತೊಡಗಿದನು. ಕೈ ಕೆಲಸದಲ್ಲಿ ತೊಡಗಿದ್ದರೂ ಮನಸ್ಸು ಗತಕಾಲಕ್ಕೆ ಸರಿಯಿತು. ಅವನು ತನ್ನ ಮದುವೆಯ ದಿನ ಹೊರಬಂದುದು, ಅದಕ್ಕೆ ಹಿಂದೆ ಏನೋ ಒಳದನಿ ಅವನನ್ನು ಎಚ್ಚರಿಸುತ್ತಿದ್ದುದನ್ನು ಕಂಡು ಅವನ ತಂದೆ ತಾಯಿಗಳು, " ಈ ಹರಿದೋಡುವ ಹೊಳೆಯನ್ನು ಮದುವೆಯ ಅಣೆಕಟ್ಟಿನಿಂದ ತಡೆಯಲು " ಪ್ರಯತ್ನಿಸಿದ್ದು, ಮುನ್ನವೇ ಈ ಹೊಳೆ ಕಡಲ ಕರೆಯನ್ನು ಕೇಳಿ ಹರಿದದ್ದು, ಮತ್ತೆ ಅಣ್ಣನವರ ಹತ್ತಿರ ಬಂದು ಸೇರಿದ ರೀತಿ ಇವನ್ನು ನೆನೆಯುತ್ತಿದ್ದನು.

ಇದ್ದಕ್ಕಿದ್ದಹಾಗೆಯೇ ಶಿಷ್ಯರೆಲ್ಲ ಅಣ್ಣನವರ ಕಡೆ ಓಡಿದ್ದನ್ನು ನೋಡಿ ಎಚ್ಚರಗೊಂಡು ತಾನೂ ಓಡಿದನು. ಅಲ್ಲಿ ಅಣ್ಣನವರ ಗುದ್ದಲಿ ನೆಲದಲ್ಲಿ ಯಾವುದಕ್ಕೋ ಸಿಕ್ಕಿಕೊಂಡಿತ್ತು. ಅಣ್ಣನವರ ಸಲಹೆಯಂತೆ ಅದನ್ನಗೆಯಲು, ಚಿನ್ನದ ವರಹಗಳು ತುಂಬಿದ ಒಂದು ಭಾರೀ ಕೊಪ್ಪರಿಗೆ ಕಾಣಿಸಿತು. ಎಲ್ಲರಿಗೂ ಅದು ಅಣ್ಣನವರ ಪವಾಡವೇ ಎನಿಸಿರುವಾಗ ಅಣ್ಣನವರು ಕಲ್ಲಯ್ಯನನ್ನು ಕುರಿತು, "ನೋಡಿದೆಯಾ ಕಲ್ಲಯ್ಯ, ಶಿವನ ಮಹಿಮೆಯನ್ನು? ಆ ಪರಮಾತ್ಮನು ತನ್ನ ಭಕ್ತಾದಿಗಳು ನಿರ್ಮಿಸುವ ದೇವಸ್ಥಾನಕ್ಕೆ ಹಣವನ್ನು ಒದಗಿಸಲಾರದ ದರಿದ್ರನೇನು? ಎಲ್ಲವೂ ನಮ್ಮ ಕೈಯಿಂದಲೇ ಆಗುತ್ತೆ ಎಂಬ ಅಹಂಕಾರದಿಂದ ಹೊರಟರೆ ಯಾವುದೂ ಸಿದ್ಧಿಸುವುದಿಲ್ಲ. ಮಾಡಿಸುವನೊಬ್ಬ ಮನದಲ್ಲಿದ್ದಾನೆ. ಅವನು ನಮ್ಮ ಮೂಲಕ ಮಾಡಿಸುತ್ತಾನೆ. ಕರ್ಮ ಮಾಡುವುದು ನಮ್ಮದು. ನಡೆಸುವುದು ಬಿಡುವುದು ಆತನದು" ಎಂದರು. ಕೆಲವು ದಿನಗಳಲ್ಲೆ ಮಲ್ಲಿಕಾರ್ಜುನನ ದೇವಾಲಯ ಸುಂದರವಾಗಿ ಮೇಲೆದ್ದಿತು. ಶುಭಮುಹೂರ್ತದಲ್ಲಿ ಲಿಂಗಪ್ರತಿಷ್ಠೆ ಆರಾಧನೆಗಳು ನಡೆದುವು. ಆಗ ಅಲ್ಲಿಗೆ ಬಂದಿದ್ದ ಮಹಾತ್ಮರೊಬ್ಬರು, "ದೇಹವೇ ದೇಗುಲವಾಗಿರುವಾಗ ಗುಡಿಗೋಪುರಗಳ ನಿರ್ಮಾಣ ಅಗತ್ಯವೇ?" ಎನ್ನಲು ಸಿದ್ಧರಾಮನು, "ನೀವು ಹೇಳುವುದು ನಿಜ. ಆದರೆ ಸಾಮಾನ್ಯ ಜನಕ್ಕೆ ದೇಹವೇ ದೇಗುಲವೆಂದು ತಿಳಿಯಬೇಕಾದರೆ ದೇವರ ಇರುವಿಕೆಯ ಅರಿವು ಬಲಿಯಬೇಡವೇ? ಇದೆಲ್ಲಾ ಜನರ ಉದ್ಧಾರಕ್ಕೆ. ಅಲ್ಲದೆ, ನನ್ನ ಕರ್ತವ್ಯವೂ ಇದೇಯೆ" ಎಂದರು.

ಇತ್ತ ಸುಗ್ಗವ್ವೆ ಮಗನ ಯೋಚನೆಯಿಂದ ಕೃಶಳಾಗಿದ್ದಳು. ತನ್ನ ಮಗ ಬಂದಿರುವನೆಂದು ತಿಳಿದು ಮುದ್ದಗೌಡನೂ ಅವಳೂ ಅಲ್ಲಿಗೆ ಹೋದರು. ಸಿದ್ಧರಾಮನು ಓಡಿಬಂದು ಅವರಿಗೆ ನಮಸ್ಕರಿಸಿದನು; ಮತ್ತೆ ಲೋಕಕಲ್ಯಾಣದ ಉದ್ಧಾರಕ್ಕೆ ಅವರಿಂದ ಅಪ್ಪಣೆ ಪಡೆದುಕೊಂಡನು.

ದೇವಾಲಯದ ನಿರ್ಮಾಣಾನಂತರ ಅಲ್ಲಿ ಒಂದು ಕೆರೆಯಾಗಬೇಕೆಂದು ಅಣ್ಣನವರಿಗೆ ಮನಸ್ಸಾಯಿತು. ಆ ಕರಿಯ ನೆಲ ಬೇಸಗೆ ಬರುವ ಮುನ್ನವೇ ಒಣಗಿ ಗಾರಾಗಿ ಕೆರೆ-ಕುಂಟೆಗಳಲ್ಲಿದ್ದ ನೀರೆಲ್ಲಾ ಬತ್ತುತ್ತಿತ್ತು. ಪಾಪ, ಆಗ ಬಾಯಾರಿದ ದನ ಮತ್ತು ಜನಗಳ ಕಷ್ಟ ಹೇಳತೀರದು. ಅಲ್ಲದೆ, ಮಲ್ಲಿಕಾರ್ಜುನ ಲಿಂಗದ ಪ್ರತಿಷ್ಠೆಯ ದಿನ ನೀರಿಲ್ಲದೆ ಬಹು ತೊಂದರೆಯಾಯ್ತು. ಆದ್ದರಿಂದ ಆ ಬೆಂಗಾಡಿನಲ್ಲಿ ಎಂದೆಂದೂ ಬತ್ತದಿರುವ, ಕ್ರಿಮಿಕೀಟಾದಿ ಸಕಲಕ್ಕೂ ಪುಣ್ಯತೀರ್ಥವಾಗುವಂಥ ಒಂದು ತಟಾಕವನ್ನು ನಿರ್ಮಿಸಬೇಕೆಂಬ ಸಂಕಲ್ಪ ಅಣ್ಣನವರಲ್ಲಿ

ಮೂಡಿತು. ಮೂರನೆಯ ದಿನವೇ ಆ ಕರ್ಮಯೋಗಿಗಳ ತಂಡ ಅಗೆಯಲು ಮೊದಲು ಮಾಡಿತು. ಪ್ರತಿದಿನ ಬೆಳಗ್ಗಿನಿಂದ ಸಂಜೆಯವರೆಗೆ ಉರಿಬಿಸಿಲಲ್ಲಿ ಆ ನಾಲ್ಕು ಸಾವಿರ ಜನ ಕೆಲಸ ಮಾಡಿದರು. ದಿನಗಳು ಉರುಳಿದುವು; ನೀರು ಮಾತ್ರ ಸಿಕ್ಕ ಲಿಲ್ಲ. ಆಗಲೂ ಅಣ್ಣನವರು ಸಂಶಯಕ್ಕೆ ಎಡೆಗೊಡಲಿಲ್ಲ. "ದೇವರು ಯಾವಾಗ ಕರುಣೆಯಿಡುತ್ತಾನೊ ಆಗ ಸತ್ಕಾರ್ಯ ಮಾಡುವವರಿಗೆ ಫಲ ದೊರೆಯದೆ ಹೋಗು ವುದಿಲ್ಲ" ಎಂದರು. ಅಂದು ಹುಣ್ಣಿಮೆಯ ರಾತ್ರಿ, ಬೆಳುದಿಂಗಳು. ಸಿದ್ಧರಾಮರು ಆ ಮಠವನ್ನು ಒಂದು ಸುತ್ತು ಹಾಕಿ ಬಂದು ಮಲಗಿದರು. ಅವರ ಮನಸ್ಸು ಕನಸಿನ ಲೋಕಕ್ಕೆ ಏರಿತು. ಸಿದ್ಧರಾಮರು ಶಿಷ್ಯರೊಂದಿಗೆ ಕೆಲಸ ಮಾಡು ತ್ತಿದ್ದಾರೆ. ಮೈಯೆಲ್ಲಾ ಬೆವರಿದೆ. ಹಾಗೆಯೇ ಮೇಲಕ್ಕೆ ನೋಡಲು, ಮಿಂಚಿನ ಕಡಲೊಂದು ದೇವಕನ್ನಿಕೆಯರ ಅವತಾರ ತಾಳಿ, ಅವರ ಬಳಿಗೆ ಬಂದು ನಮಸ್ಕರಿಸಿ ನಿಂತರು. "ತಾವು ಯಾರು, ಏಕೆ ಬಂದಿರಿ?" ಎನ್ನಲು ಅವರು, ಗಂಗಾಧರನು ಅವರ ಕರ್ಮಯೋಗ ನಿಲ್ಲಿಸಲು ತಮ್ಮನ್ನು ಕಳುಹಿಸಿದನೆಂದೂ, ತಮಗೆ ಆ ಕೆರೆಯಲ್ಲಿ ನೆಲಸಿ ಶಿವನ ಸೇವೆಯಲ್ಲಿ ಭಾಗಿಗಳಾಗಲು ಅಪ್ಪಣೆ ಕೊಡಬೇಕೆಂದೂ ಕೇಳಿದರು. ಸಿದ್ಧರಾಮನು, "ತಾಯ್ಗಳಿರಾ, ಇದು ನೀವಿರಲು ತಕ್ಕುದಲ್ಲ" ಎನ್ನಲು, ಅವರು ತಮ್ಮನ್ನು ಹಿಂದಕ್ಕೆ ಕಳುಹಿಸಬಾರದಾಗಿ ಬೇಡಿದರು. ಸಿದ್ಧರಾಮನು ಆಗಲಿ ಎಂದನು. ನೋಡುತ್ತಿದ್ದಂತೆಯೇ ಅವರು ಕರಗಿ ನೀರಾಗಿ ಆ ಕೆರೆಯನ್ನು ತುಂಬಿದರು.

ಸಿದ್ಧರಾಮನಿಗೆ ಎಚ್ಚರವಾಯ್ತು. ಕಿಟಕಿಯಿಂದ ಬಂದ ತಂಗಾಳಿಯಿಂದ ಇರುಳೆಲ್ಲಾ ಭಾರಿ ಮಳೆಯಾಗಿದೆ ಎಂಬುದು ಗೋಚರಿಸಿತು. ಕಲ್ಲಯ್ಯನು ಅಷ್ಟುಹೊತ್ತಿಗೆ ಬಂದು ಮಳೆಯ ವಿಷಯವನ್ನು ತಿಳಿಸಿ, ಎಲ್ಲರೂ ಹೋಗಿ ನೋಡಲು ಹಿಂದಿನ ದಿನ ನಿರಾಶೆಯ ಕೂಪದಂತಿದ್ದ ತಟಾಕವು ಪೂರ್ಣಜಲದಿಂದ ರಂಜಿಸುತ್ತಿತ್ತು. "ಇವೆಲ್ಲಾ ಕರ್ಮಯೋಗದ ಫಲಗಳು. ಫಲವನ್ನು ದೇವರಿಗೆ ಬಿಟ್ಟು ನಾವು ಕೆಲಸ ಮಾಡಬೇಕು. ಫಲವು ಎಂದು ಯಾವ ರೂಪದಲ್ಲಿ ಸಿದ್ಧಿಸು ತ್ತದೆಯೋ ಹೇಳಲಾಗುವುದಿಲ್ಲ. ಕರ್ಮ ಮಾಡುವುದು ಮಾತ್ರ ನಮ್ಮ ಕರ್ತವ್ಯ" ಎಂಬ ಕರ್ಮಯೋಗದ ತಿರುಳನ್ನು ಸಿದ್ಧರಾಮ ತನ್ನ ಶಿಷ್ಯರಿಗೆ ಮಾಡಿ ತೋರಿಸಿ ಮನದಟ್ಟು ಮಾಡಿದನು.

ಇಂತು, ಕರ್ಮಯೋಗದ ಸಿದ್ಧಿಯನ್ನು ಸಾಧಿಸಿ ತೋರಿದ, ಸಿದ್ಧಿಯನ್ನು

ಪಡೆದ, 'ಸಿದ್ಧ'ರಾಮನ ಹೆಸರು ಅನ್ವರ್ಥ. ಕರ್ಮಯೋಗದ ಸಿದ್ಧಿಯನ್ನು ಪಡೆದ ಸಿದ್ಧರಾಮನು ನಿಜವಾಗಿ ಕರ್ಮಯೋಗಿ.

—ಸಿ. ತಮ್ಮಣ್ಣ
(Pu.C.,Q.)

---

# ಪವಾಡಪುರುಷ ಸಿದ್ಧರಾಮ

"ಈ ಜನಕ್ಕೆ ತಮ್ಮಿಂದ ತಮ್ಮ ಕ್ಷೇತ್ರದ ಮಹಿಮೆ ತೋರುವಂತೆ ಏನಾದರೂ ಒಂದು ಅದ್ಭುತವನ್ನು ತೋರಿಸಬೇಕು, ಒಂದು ಪವಾಡವನ್ನು ತೋರಿಸಬೇಕು."

"ಈ ಸೃಷ್ಟಿಯೇ ಒಂದು ಪವಾಡವಲ್ಲವೇನೋ, ಮರುಳೆ."

"ಆದರೆ, ಜನದ ಬಾಯಿ ಮುಚ್ಚಿಸುವುದಕ್ಕೆ ತಮ್ಮಿಂದ ಒಂದು ಪವಾಡ ಬೇಕು."

"ಅವೆಲ್ಲಾ ದೊಂಬರಾಟಗಳು. ಅಲ್ಪ ಸಿದ್ಧಿಗೂ ಅವು ಸಾಧ್ಯ. ನಮ್ಮ ಶಕ್ತಿಯನ್ನು ದುರ್ವಿನಿಯೋಗಪಡಿಸಬಾರದು. ಜನಸೇವೆ ಮಾಡುವವನಿಗೆ ಜನ ತನ್ನ ಬಗ್ಗೆ ಏನೆನ್ನುತ್ತಾರೆ ಎಂಬುದನ್ನು ಕುರಿತು ಆಸಕ್ತಿ ಇರಬಾರದು."

ಇಂತು ಸಾಗಿತು ಗುರು-ಶಿಷ್ಯರ ಸಂವಾದ, ಪವಾಡ ಪ್ರದರ್ಶನದ ಆವಶ್ಯಕತೆ ಕುರಿತು.

ಆದರೆ ಕಲ್ಲಯ್ಯನ ಬಲವಂತದಿಂದ ಅಣ್ಣನವರು, "ಆಗಲಿ ಕಲ್ಲಯ್ಯ. ಅದಕ್ಕೂ ಒಂದು ಕಾಲ ಬಂದೀತು. ಆಗ ತೋರಿಸುತ್ತೇನೆ" ಎಂದಿದ್ದರು.

ಸಿದ್ಧರಾಮನ ದೃಷ್ಟಿಯಲ್ಲಿ "ಸ್ವಾರ್ಥತೆಯಿಂದ, ಜನರ ಹೊಗಳಿಕೆಗೆ ಪಾತ್ರರಾಗಲು, ತಮ್ಮ ಶಕ್ತಿಯನ್ನು ದುರ್ವಿನಿಯೋಗಪಡಿಸಿಕೊಳ್ಳಬಾರದು."

ಇದಕ್ಕೆ ಮೊದಲು, ಸಿದ್ಧರಾಮನು ಹುಟ್ಟಿದ್ದೇ ಒಂದು ಪವಾಡವಲ್ಲವೆ ? ಸುಗ್ಗವ್ವೆಗೂ, ಮುದ್ದಗೌಡನಿಗೂ ಐವತ್ತರ ಮೇಲೆ ವಯಸ್ಸಾಗಿ ಮುಪ್ಪು ಮುಸುಕಿರುವಾಗ ಸಿದ್ಧರಾಮನು ಜನಿಸಿದನು. ಅದನ್ನು ಲೇಖಕರು ಪವಾಡವಲ್ಲ ವೆಂಬಂತೆ, ಸಾಮಾನ್ಯದಂತೆ, "ಕನಸು-ನನಸು" ಎಂಬ ರೀತಿಯಲ್ಲಿ ಚಿತ್ರಿಸಲು ಯತ್ನಿಸಿದ್ದಾರೆ.

ಅದಲ್ಲದೆ, ಸಿದ್ಧರಾಮನು ರುದ್ರಗಮ್ಮರಿಯಲ್ಲಿ ನಿಂತು ಕೆಳಕ್ಕೆ ಧುಮುಕಿದಾಗ ಅಪೂರ್ವ ಸನ್ನಿವೇಶವೊಂದು ಒದಗಿ,ಅವನು ರಜತಾಚಲದ ಸೆತ್ತಿಯಲ್ಲಿದ್ದುದು, ಅಲ್ಲಿ ಮಲ್ಲಯ್ಯನ ದರ್ಶನ ಪಡೆದುದು ಇವು—ಪವಾಡವಲ್ಲವೆ ?

ಮತ್ತೆ, ಸಿದ್ಧರಾಮನು ಕೆರೆಯನ್ನು ಕಟ್ಟಿದ್ದು, ದೇವಸ್ಥಾನವನ್ನು ಕಟ್ಟಿದ್ದು, ಮತ್ತೆರಡು ಪವಾಡಗಳು ! ದೇವಸ್ಥಾನದ ಕಟ್ಟಡಕ್ಕೆ ಬಿಡಿಕಾಸು ಇರಲಿಲ್ಲ. ಆದರೆ ಸಿದ್ಧರಾಮನು ಧೈರ್ಯದಿಂದ ಆ ಕೆಲಸಕ್ಕೆ ಕೈಹಾಕಿದನು. ಹೀಗೆ, ಅಣ್ಣನವರು ಭೂಮಿಯನ್ನು ಅಗೆಯುತ್ತಿರುವಾಗ, ಒಂದು ಕೊಪ್ಪರಿಗೆ ನಿಧಿ ದೊರೆತು, ಮುಂದಿನ ಕಟ್ಟಡಕ್ಕೆ ಸಹಾಯವಾಯಿತು. ಇಲ್ಲಿ ಕೊಪ್ಪರಿಗೆ ಹಣ ಸಿಕ್ಕಿದ್ದು ಒಂದು ಪವಾಡ ! ಇದರಂತೆ, ಕೆರೆ ಕಟ್ಟುವಾಗ, ಕೆರೆಯನ್ನು ಎಷ್ಟು ತೋಡಿದರೂ ನೀರು ಬರಲಿಲ್ಲ. ಇದ್ದಕ್ಕಿದ್ದಂತೆ ಒಂದು ರಾತ್ರಿ ಕನಸಿನಲ್ಲಿ ಲೋಕದ ಅಗ್ರನದಿಗಳೆಲ್ಲಾ ಬಂದು ನೆಲೆಸಿದಂತಾಗಿ, ಆ ರಾತ್ರಿಯೇ ಭಾರಿ ಮಳೆ ಬಂದು, ಆ ಕೆರೆ ನೀರಿನಿಂದ ತುಂಬಿ ತುಳುಕಿತು. ಇದೂ ಒಂದು ಪವಾಡವಲ್ಲವೆ ?

ಆದರೆ ಇವೆಲ್ಲವೂ ಜನಸಾಮಾನ್ಯರಿಗೆ ಸಾಮಾನ್ಯದಂತೆ ತೋರಿದುವೇ ಹೊರತು ಅದ್ಭುತವಾಗಿ ಕಾಣಲಿಲ್ಲ. ಅದಕ್ಕೆಂದೇ ಇರಬೇಕು ಕರ್ಮಯೋಗದ ಈ ಸಿದ್ಧಿಗಳನ್ನು ಸಾಮಾನ್ಯದಂತೆ ಚಿತ್ರಿಸಿದ್ದಾರೆ ಲೇಖಕರು.

ಒಂದು ಸಂದರ್ಭದಲ್ಲಿ ಪವಾಡವನ್ನು ಮೆರೆಯಲೇ ಬೇಕಾಗುತ್ತದೆ....

ಅಂದು ಬೆಳಗ್ಗೆ ದೇವಸ್ಥಾನದಲ್ಲಿ ದೇವರ ಪೂಜೆಯ ಅನಂತರ ಪ್ರಸಾದವನ್ನು ಹಂಚಲು ಅಣ್ಣನವರು ಸಿದ್ಧರಾದರು. ಅದರಲ್ಲಿ ಭಯಂಕರ 'ವಿಷ' ಮಿಶ್ರನಾಗಿರುವುದನ್ನು ಅವರು ತಿಳಿಯುದಿರಲಿಲ್ಲ. ಒಂದು ಕ್ಷಣ ಮನಸ್ಸಿನಲ್ಲಿ ಹಾಲಾಹಲ ಪಾನಮಾಡಿದ ಈಶ್ವರನ ಮೂರ್ತಿ ಸುಳಿದು ಮಾಯವಾಯಿತು. ಅಂದಿನ ಪ್ರಸಾದವನ್ನು ಏರ್ಪಡಿಸಿದ ಆಗಂತುಕ ಭಕ್ತರಿಗೆ ಮೊದಲು ಹಂಚಲಾಗಿ ಅವರು ನಡುಗುತ್ತ "ಮೊದಲು ತಮ್ಮವರಿಗೆ ವಿನಿಯೋಗವಾಗಲಿ" ಎಂದರು. ಅದರಂತೆ ಅಣ್ಣನವರು ಮೊದಲು ತಮ್ಮವರಿಗೇ ಹಂಚಿದರು. "ಬಲು ರುಚಿಯಾಗಿದೆ" ಎಂದು ತಿಂದರು. ಅದನ್ನು ಕಂಡು ಆಗಂತುಕ ಭಕ್ತರು ಪಲಾಯನಗೈದರು ! ಆದರೆ ಸಿದ್ಧರಾಮನ ಶಿಷ್ಯರು ಅವರನ್ನು ಹಿಡಿದು ತಂದರು. ಕಲ್ಲಯ್ಯ ಕೇಳಿದನು : "ಯಾರೋ ನೀವು ? ಹೀಗೇಕೆ ಮಾಡಿದಿರಿ ?" "ನಾವು ಕೋವೂರಿನ ಕಡೆಯವರು, ಕುಟಿಲ ವಿದ್ಯಾಸಾಗರನ ಕಡೆಯವರು. ತಪ್ಪಾಯ್ತು ಬಿಟ್ಟುಬಿಡಿ" ಎಂದು ಅವರು ಅಂಗಲಾಚಿದರು. ಆಗ ಕಲ್ಲಯ್ಯ, "ಓ ! ವಿಷಹಾಕಿ ಕೊಲ್ಲಬೇಕು ಅಂತ ಬಂದಿರೋ ?" ಕಲ್ಲಯ್ಯನ ಪ್ರಶ್ನೆಗೆ ಆಗಂತುಕ ಭಕ್ತ ವೇಷ

ಧಾರಿಗಳು ನಡುಗಿದರು. ಸಿದ್ಧರಾಮನು ಅವರನ್ನು ಕುರಿತು, "ಇಲ್ಲಿರುವ ಮಹಿಮೆ ತನ್ನದಲ್ಲ; ಮಲ್ಲಿಕಾರ್ಜುನನದು. ಮಹಾಗುರುವಾದ ಮಲ್ಲಯ್ಯನ ಮುಂದೆ ನಾನೆಷ್ಟರವನು? ಅವನು ಒಲಿದರೆ, ವಿಷ ಅಮೃತವಾಗುವುದರಲ್ಲಿ ಏನಾಶ್ಚರ್ಯವಿಲ್ಲ....ನಿಮಗೆ ಇನ್ನೂ ಪ್ರಮಾಣ ಬೇಕೋ? ಕೊಂಚ ಇರಿ. ಸಂಜೆಗೆ ಮತ್ತೊಂದು ಪವಾಡವನ್ನು ಕಂಡೇ ಹೋಗುವಿರಂತೆ."

ಅವರ ವಾಣಿಯನ್ನು ಆಲಿಸುತ್ತಿದ್ದ ಶಿಷ್ಯರು ಮೂಕರಾದರು. ನಿಜವಾಗಿಯೂ ಅವರೆಲ್ಲರೂ ತಮ್ಮ ಕಣ್ಣೆದುರಿಗೇ ಒಂದು ಪವಾಡವನ್ನು ಕಂಡಿದ್ದರು. ಶಿವನು ವಿಷವನ್ನು ಕುಡಿದನೆಂಬುದು ಪುರಾಣಕಥೆ; ಆದರೆ ಅಣ್ಣನವರು ಎಷ್ಟು ಸಹಜವಾಗಿ ತೋರಿಸಿದರು ಅದನ್ನು! ಇಲ್ಲಿ ತಾವು ಕಣ್ಣೆದುರಿಗೆ ಆ ಪ್ರಸಂಗವನ್ನು ಕಂಡಿದ್ದರು. ಸಂಜೆ ಮತ್ತೆ ಯಾವ ಅದ್ಭುತ ಪವಾಡ ನಡೆಯಲಿರುವುದೋ....?

ಸಂಜೆಯಾಯಿತು. ಅಂತೆಯೇ ಪವಾಡವನ್ನು ನೋಡಲು ಜನ ಇರುವೆ ಸಾಲಿನಂತೆ ಸೊನ್ನಲ್ಲಿಗೆಯ ಕೆರೆಯ ನಡುವಣ ಮಲ್ಲಿಕಾರ್ಜುನನ ದೇಗುಲದೆಡೆ ಸೇರಿತ್ತು. ಈ ಮಧ್ಯೆ ಸಿದ್ಧರಾಮನ ಶಿಷ್ಯರು ಕುಟಿಲ ವಿದ್ಯಾಸಾಗರನ ಕಡೆಯುವರನ್ನು ಮಧ್ಯೆ ನಿಲ್ಲಿಸಿಕೊಂಡು ನಿಂತಿದ್ದರು. ಸಂಜೆಯಾಗುವುದರೊಳಗಾಗಿ ಯಾವ ಪವಾಡ ನಡೆಯುವುದೋ, ಅದನ್ನು ಕಾಣುವ ಪುಣ್ಯ ತಮ್ಮ ಕಣ್ಣುಗಳಿಗೆ ಯಾವಾಗ ಒದಗೀತೋ ಎಂದು ಜನ ಎವೆ ಮಿಡುಕದೆ ಕಾದಿದ್ದರು.

ಜನಸಮುದ್ರದ ನಡುವೆ ದ್ವೀಪದಂತಿದ್ದ ಆ ಕಟ್ಟೆಯ ಮೇಲೆ ಸಿದ್ಧರಾಮ ಎದ್ದು ನಿಂತನು. ಅಷ್ಟರಲ್ಲೇ ನಾಲ್ಕೈದು ಮಂದಿ ಕಬ್ಬಿಣದ ಇಕ್ಕುಳದಲ್ಲಿ ಕೆಂಪಗೆ ಕಾದ ಪಂಚಲೋಹದ ಗುಂಡನ್ನು ತಂದರು. ಮುಳುಗುತ್ತಿರುವ ಫಾಲ್ಗುಣ ರವಿಬಿಂಬದಂತಿದ್ದ ಆ ಲೋಹದ ಗುಂಡನ್ನು ಕಂಡು ಜನ ಬೆರಗಾಗಿ ಬೆಚ್ಚಿ ನಡುಗಿದರು.

ಸಿದ್ಧರಾಮನು ಮಲ್ಲಿಕಾರ್ಜುನನಿಗೆ ಕೈಮುಗಿದು ಗಂಭೀರವಾದ ಧ್ವನಿಯಲ್ಲಿ "ಸೊನ್ನಲಿಗೆ ಕಾಶಿ-ಶ್ರೀಶೈಲಾದಿ ಕ್ಷೇತ್ರಗಳ ಮಹಿಮೆ ಇರುವುದಾದರೆ, ನಾನೂ ನನ್ನ ಶಿಷ್ಯರೂ ನಿಸ್ಸ್ವಾರ್ಥವಾದ ಕರ್ಮಯೋಗದಲ್ಲಿ ತೊಡಗಿರುವುದು ಸತ್ಯವಾದರೆ, ಈ ಲೋಹದ ಗುಂಡು ನನ್ನ ಕೈಯನ್ನು ಸುಡದಿರಲಿ" ಎಂದನು.

ಸಿದ್ಧರಾಮನು ತನ್ನ ಬಲಗೈಯನ್ನು ಚಾಚಿದನು. ಆ ಕೆಂಪಗೆ ಕಾದ ಲೋಹದ ಗುಂಡು ಸಿದ್ಧರಾಮನ ಅಂಗೈಯನ್ನು ಅಲಂಕರಿಸಿತು. ಜಾಜ್ವಲ್ಯಮಾನವಾದ ಆ ಗುಂಡು ಸಿದ್ಧರಾಮನ ಅಂಗೈಮೇಲೆ, ಆದಿಶೇಷನ ಹೆಡೆಯ ಮಣಿಯಂತೆ ರುದ್ರರಮ್ಯವಾಯಿತು. ಸಿದ್ಧರಾಮನು ನಸುನಗುತ್ತ ಆ ಗುಂಡನ್ನು

ಪಕ್ಕಕ್ಕೆಸೆದನು. ಆ ಗುಂಡು ಬಿದ್ದ ಜಾಗದಲ್ಲಿ ಭುಗಿಲೆಂದು ಹೊಗೆಯಾಡಿತು; ಜನದ ಜಯಘೋಷ ಮುಗಿಲನ್ನು ತಾಗಿತು.

ಶಿಷ್ಯರು ಹಿಗ್ಗಿದರು; ಪರವಾದಿಗಳು ಉಡುಗಿದರು; ಕುಟಿಲ ವಿದ್ಯಾ ಸಾಗರನ ಕಡೆಯುವರು ಬೆದರಿ ಬೆಂಡಾದರು; ಜನ ಸ್ತುತಿಸಿದರು.

ಅಣ್ಣನವರು ತಾವು ಏನೂ ಮಾಡಿಲ್ಲವೆಂಬಂತೆ ಸುತ್ತಲೂ ವಂದಿಸುವ ಜನದ ಕಡೆ ಮುಗುಳ್ನಗೆ ಬೀರುತ್ತ ಮಠದ ಕಡೆ ಹೊರಟರು.

ಆಗತಾನೆ ಹೊತ್ತು ಮುಳುಗುತ್ತಲಿತ್ತು. ಅಣ್ಣನವರು ಎಸೆದ ಪಂಚ ಲೋಹದ ಗುಂಡು ಸೂರ್ಯನಾಗಿ ಮುಳುಗುತ್ತಿದೆಯೋ ಎನ್ನಿಸಿತು ಜನಕ್ಕೆ. ಈ ರೀತಿ ಮತ್ತೊಂದು ಪವಾಡವನ್ನು ಮೆರೆದನು ಸಿದ್ಧರಾಮ. ಹೀಗೆ, ಇಷ್ಟವಿಲ್ಲ ದಿದ್ದರೂ ಪವಾಡಗಳನ್ನು ಮೆರೆದು ಸಿದ್ಧರಾಮನು "ಪವಾಡಪುರುಷ" ಎನಿಸಿ ಕೊಂಡನು.

—**ಟಿ. ಎಸ್. ಸೀತಾರಾಮರಾವ್**
(Pu.C.,H.)

---

# ಸಂಗಯ್ಯ - ಚೆನ್ನವ್ವೆಯರ ಸಂಸಾರ ಯೋಗ

ಕರ್ಮಯೋಗಿ ಸಿದ್ಧರಾಮನ ಶಿಷ್ಯರಲ್ಲಿ ಒಬ್ಬನು ಸಂಗಯ್ಯ. ಸಿದ್ಧರಾಮನ ಶಿಷ್ಯರಾದ ಕಲ್ಲಯ್ಯ ಮುಂತಾದವರಂತೆ ಕಾಯಕವೇ ಯೋಗವೆಂದು ನಂಬಿ, ಬಾಹ್ಯಪ್ರಪಂಚದ ಆಡಂಬರ ಜೀವನವನ್ನು ತ್ಯಜಿಸಿ ವಿರಾಗಿಯಾಗಿ ಶಿಷ್ಯನಾಗಿರ ಲಿಲ್ಲ ಈ ಸಂಗಯ್ಯ. ತಂದೆ ತಾಯಿಗಳು ತನಗೆ ಮೆಚ್ಚುಗೆಯಿಲ್ಲದ ಕುವರಿ ಯನ್ನು ಮದುವೆಗೆ ಏರ್ಪಾಟು ಮಾಡಿದುದರಿಂದ ಒಲ್ಲದ ಮದುವೆಯಿಂದ ತಪ್ಪಿಸಿ ಕೊಳ್ಳಲು, ಹಿರಿಯರ ಅಪ್ಪಣೆ ಇಲ್ಲದೆ ಸಿದ್ಧರಾಮನ ಶಿಷ್ಯ ಕೋಟಿಯಲ್ಲೇ ಒಬ್ಬನಾಗಿ ಸೇರಿಕೊಂಡಿದ್ದನು. ಆದರೆ ಸಂಗಯ್ಯನಲ್ಲಿ ಸಿದ್ಧರಾಮನ ಬೋಧಾ ಮೃತದಿಂದ ವೈರಾಗ್ಯ ತುಂಬಿ ಬರಲಿಲ್ಲ. ಹೊರಗಿನ ಭೋಗವಿಲಾಸ ಜೀವನ ಕ್ಕಾಗಿ ಅವನ ಮನ ಪರಿತಪಿಸುತ್ತಿತ್ತು. ಒಮ್ಮೆ ಸಿದ್ಧರಾಮನ ಗುರುಬೋಧೆ

ಸಂಗಯ್ಯನಲ್ಲಿ ನಿಂತರೆ ಮತ್ತೊಮ್ಮೆ ಅದನ್ನು ಪ್ರತಿಭಟಿಸಿ ಮಾಯೆ ಬಾಹ್ಯ ಪ್ರಪಂಚದ ವ್ಯಾಮೋಹದ ಕಡೆಗೆಳೆಯುತ್ತಿತ್ತು. ಇದರಿಂದಲೇ ತಿಳಿಯುವುದು ಅವನಲ್ಲಿ ಉಂಟಾಗಿದ್ದ ಅಭಾವ ವೈರಾಗ್ಯ. ಅವನಲ್ಲಿ ಇನ್ನೂ ಸಂಪೂರ್ಣವಾಗಿ ಮನಸ್ಸಿನ ಪರಿವರ್ತನೆಯಾಗಿರಲಿಲ್ಲ. ಆದರೂ ಎಲ್ಲಾ ಶಿಷ್ಯರಂತೆ ತಾನೂ ಸಿದ್ಧರಾಮನಿಂದ ಅಮೃತವಚನಗಳನ್ನು ಪಡೆಯುತ್ತಲೂ, ವಿರಾಗಿಯಂತೆ ವರ್ತಿಸುತ್ತಲೂ ಇದ್ದನು.

ಹೀಗಿರುವಲ್ಲಿ ಸಿದ್ಧರಾಮನ ಮಠಕ್ಕೆ ಒಬ್ಬ ಸಾಧ್ವಿ ಅಕ್ಕಮಹಾದೇವಿಯ ಮತ್ತು ಬಸವಣ್ಣನವರ ವಚನಗಳನ್ನು ಹಾಡುತ್ತ ಪ್ರವೇಶಿಸಿದಳು. ಅವಳೇ ಚೆನ್ನವ್ವ. ಚೆನ್ನವ್ವನೂ ಸಹ ಒಬ್ಬ ತಬ್ಬಲಿ. ತಾಯಿ ತಂದೆಗಳು ಯಾವುದೋ ವ್ಯಾಧಿಗೆ ತುತ್ತಾದುದರಿಂದ, ದಿಕ್ಕಿಲ್ಲದೆ, ಮನೆ ಮಠವಿಲ್ಲದೆ, ನೆಲಸಲು ಆಸರೆ ಇಲ್ಲದೆ, ಕ್ಷಣಿಕ ವೈರಾಗ್ಯ ಹೊಂದಿ ಬಂದವಳು. ಅವಳ ಕೋಮಲ ಕಂಠ, ಅವಳ ಸುಂದರ ಮೂರ್ತಿ, ಅವಳ ಮುಖದ ಆಕರ್ಷಣೆ, ಎಂಥವರನ್ನೂ ಭಾವಪರವಶರನ್ನಾಗಿಸುತ್ತಿದ್ದುವು.

ಅವಳು ಮಠವನ್ನು ಪ್ರವೇಶಿಸಿದ ದಿನವೇ ಸಂಗಯ್ಯನ ಅಭಾವ ವೈರಾಗ್ಯ ನಶಿಸಿ ಅವನಲ್ಲಿ ಸುಪ್ತವಾಗಿ ಅಡಗಿದ್ದ ವಿಲಾಸಜೀವನದ ಆಕಾಂಕ್ಷೆ ಜಾಗ್ರತಗೊಂಡ ದಿನ! ಸಂಗಯ್ಯನ ಮನ ಚೆನ್ನವ್ವೆಯ ಸ್ನೇಹಕ್ಕಾಗಿ ತಲ್ಲಣಿಸಿದ ದಿನ! ಅವನ ಮನದಲ್ಲಿ ಯೋಚನಾತರಂಗಗಳೆದ್ದು, ಅವಳ ಸಂದರ್ಶನಕ್ಕಾಗಿ ತುಮುಲಯುದ್ಧ ನಡೆದ ದಿನ! ಆ ದಿನ ಮಠದಲ್ಲಿ ಅವಳ ಹಾಡುಗಾರಿಕೆ ನಡೆಯುತ್ತಿದೆ. ಸಿದ್ಧರಾಮನ ಸಹಿತ ಮಠದ ಶಿಷ್ಯಮಂಡಳಿ ವಚನಗಳಲ್ಲಿ ಅಡಗಿರುವ ಭಕ್ತಿರಸದ ಸವಿಯನ್ನು ಸವಿಯುತ್ತಾ ಮಂತ್ರಮುಗ್ಧರಾಗಿ ಒಂದುಕಡೆ ಇದ್ದರೆ ಇನ್ನೊಂದು ಕಡೆ ಸಂಗಯ್ಯನು ಅವಳ ಸೌಂದರ್ಯಕ್ಕೆ, ಅವಳ ಮಂಜುಳ ಗಾನಕ್ಕೆ, ಮಾರು ಹೋಗಿ ಭಾವಪರವಶನಾಗಿದ್ದಾನೆ.

ಆ ದಿನ ಚೆನ್ನವ್ವೆಯ ಸೌಂದರ್ಯಕ್ಕೆ ಮನಸೋತು ಸಂಗಯ್ಯ ಏಕಾಂತದಲ್ಲಿ ಕುಳಿತಿರಲು ಅವನ ಚಿತ್ತಫಲಕಕ್ಕೆ ಅವನು ಅವಳಲ್ಲಿ ಕಂಡಿದ್ದ ಒಂದೊಂದು ಲಾವಣ್ಯದ ಕಲೆ ಬರುವುದು. ಚೆನ್ನವ್ವೆಯ ಮೂರ್ತಿ ನಿಜವಾದ ದೇವಲೋಕದ ಅಪ್ಸರೆಯೆಂಬಂತೆ ಸಂಗಯ್ಯನಿಗೆ ಅನಿಸಿತು. ಅವಳ ಮೈಯನ್ನು ಆವರಿಸಿದ್ದ ಬಿಳಿಯ ಸೀರೆ, ಮೋಹಿನಿಗೆ ಹರಡಿರುವಂತೆ ಅವಳ ತಲೆಯಿಂದ ಬೆನ್ನ ಮೇಲೆಲ್ಲಾ ಹರಡಿದ್ದ ಕಪ್ಪು ಕೇಶರಾಶಿ, ಪೂರ್ಣಚಂದ್ರನಲ್ಲಿ ಮಧ್ಯೆ ಕಾಣುವ ಕಪ್ಪು ಚುಕ್ಕೆಯಂತೆ ಅವಳ ಹಣೆಯ ವಿಭೂತಿಯ ನಡುವೆ ಕಂಗೊಳಿಸುತ್ತಿದ್ದ ಕೆಂಪು

ಕುಂಕುಮ, ಕೈಯಲ್ಲಿನ ತಂಬೂರಿ ಮತ್ತು ಹೆಗಲಲ್ಲಿನ ಜೋಳಿಗೆ—ಇವುಗಳ ಒಟ್ಟಿನ ಪರಿಣಾಮವು ಸಂಗಯ್ಯನಿಗೆ ಚಿತ್ರಪಟದಂತೆ ಮನದಲ್ಲಿ ಪ್ರತಿಬಿಂಬಿಸಿ, ಕ್ಷಣಕ್ಷಣಕ್ಕೂ ಕುತೂಹಲವನ್ನುಂಟುಮಾಡುತ್ತಿತ್ತು. ಅವಳ ಮೃದು ಮಧುರಗಾನದ ಮುಂದೆ ಚೈತ್ರಮಾಸದ ಕೋಗಿಲೆಯ ಕಂಠಧ್ವನಿ ಏಕೆ ? ನಿಸರ್ಗದ ಮಡಿಲಲ್ಲಿ ಸ್ವೇಚ್ಛೆಯಾಗಿ ಹೂವಿನಿಂದ ಹೂವಿಗೆ ಮಧುರಸಕ್ಕಾಗಿ ಹಾರಾಡುವ ದುಂಬಿಯ ಝೇಂಕಾರಕ್ಕಿಂತ ಮಿಗಿಲಾಗಿತ್ತು ಅದು. ಸಂಗಯ್ಯನಿಗೆ ನಿಜವಾಗಿಯೂ ಇವಳು 'ವಿರಾಗಿಯೇ ?' ಎಂಬುದಾಗಿ ಒಂದು ಸಲ ಹೊಳೆಯುತ್ತಿತ್ತು. ಆದರೇನು ? ಸಂಗಯ್ಯನ ಅಭಾವ ವೈರಾಗ್ಯ ಈ ಸೌಂದರ್ಯ ಮೂರ್ತಿಯಿಂದ ಮಾಯ ವಾಯಿತು. ಕಬ್ಬಿಣದಿಂದ ದೂರವಾಗಿರುವಾಗ ಅಯಸ್ಕಾಂತವು ಕೇವಲ ಕಬ್ಬಿಣ ದಂತಿರುತ್ತದೆ. ಆದರೆ ಹತ್ತಿರ ತಂದಾಗ ಅದು ಕಬ್ಬಿಣವನ್ನು ಆಕರ್ಷಿಸದೆ ಬಿಡದು. ಅದರಂತೆ ಸಂಗಯ್ಯನು ಕೂಡ ಚೆನ್ನವ್ವೆಯಿಂದ ಆಕರ್ಷಿಸಲ್ಪಟ್ಟನು. ಕ್ಷಣಕ್ಷಣಕ್ಕೂ ತನ್ನ ಮನದಲ್ಲಿ ನೆಲಸಿರುವ ಚೆಲುವೆಯನ್ನು ಕಾಣಬೇಕೆಂಬ ಹಂಬಲ ಉಂಟಾಯಿತು. ಅನಂತ ವರ್ಷಗಳ ತಪಸ್ಸನ್ನು ಆಚರಿಸಿ ಸರ್ವಸಂಗ ಪರಿತ್ಯಾಗ ಮಾಡಿದ ವಿಶ್ವಾಮಿತ್ರನೇ ಕೇವಲ ಒಬ್ಬ ಸ್ತ್ರೀಯ ರೂಪಲಾವಣ್ಯಕ್ಕೆ ಮಾರು ಹೋದಾಗ, ಕೇವಲ ಸುಂದರಿಯನ್ನು ಮದುವೆಯಾಗುವ ಯೋಗವನ್ನು ತಮ್ಮ ಹಿರಿಯರು ತಪ್ಪಿಸುತ್ತಾರಲ್ಲಾ ಎಂದು ಅರಿತು ಮಠವನ್ನು ಆಶ್ರಯಿಸಿಗುವ ಸಂಗಯ್ಯನು ಮೋಹಪಾಶದಲ್ಲಿ ಬೀಳುವುದರಲ್ಲಿ ಸಂಶಯವೆಲ್ಲಿಯದು ? ಆ ಚೆಲುವೆಯು ನುಡಿದ " ಬಿಟ್ಟೆನೆಂದರೆ ಬಿಡದೀ ಮಾಯೆ, ಬಿಡದಿದ್ದರೆ ಬೆಂಬತ್ತಿತ್ತು ಮಾಯೆ " ಎಂಬುದು ಸಂಗಯ್ಯನಲ್ಲಿ ಪ್ರತಿಧ್ವನಿಸಿತು.

ಕೊನೆಗೂ ಸಂಗಯ್ಯನ ಮನ ಒಂದು ನಿಶ್ಚಯಕ್ಕೆ ಬಂತು. ಮನದ ಆದೇಶದಂತೆ ಕಾಲುಗಳು ಚೆನ್ನವ್ವೆಯ ಕೊಠಡಿಯನ್ನು ಮರುದಿನ ಮುಂಜಾನೆಯೇ ಸಮೀಪಿಸಿದುವು. ಮಾಯೆಯಿಂದ ಪೂರ್ಣ ಆವರಿಸಲ್ಪಟ್ಟ ಮನಕ್ಕೂ ಎಲ್ಲೋ ಅಲ್ಪ ಪ್ರಮಾಣದ, ಅಕಾಲದ, ದುರ್ಬಲವಾದ, ವೈರಾಗ್ಯದ ಅಭಾವ ಮನದ ಅರಿವಿಗೂ ಒಳ ಹೋರಾಟ ನಡೆಯಿತು. ಮಾಯೆಯೇ ಗೆದ್ದಿತು. ಕೊಠಡಿಯ ಕಿಟಕಿಯ ಮೂಲಕ ಸಂಗಯ್ಯ ಇಣಿಕಿ ನೋಡಿದ. ಕಾಣಿಸಿತು ಆ ಯುವತಿಯ ಮುಗ್ಧಮೋಹನ ವದನ. ಅವಳು ಆಗತಾನೆ ಎದ್ದು ಕುಳಿತಿದ್ದಳು. ಅಮೃತ ಶಿಲೆಯಂತಿದ್ದ ಅವಳ ಮೈಮೇಲೆಲ್ಲಾ ಕಪ್ಪು ಕೇಶರಾಶಿ ಹರಡಿತ್ತು. ಅವಳ ಅನುಪಮ ಮನಮೋಹಕ ಸೌಂದರ್ಯವು ಸಂಗಯ್ಯನನ್ನು ಬೆರಗುಗೊಳಿಸಿತು. ತನ್ನ ಮನೋಕಾಂಕ್ಷೆಯನ್ನು ಅನಾಯಾಸವಾಗಿ ಅನಿರೀಕ್ಷಿತವಾಗಿ ದೊರೆತ

ಪ್ರೇಯಸಿಗೆ ಅರುಹಲು ಮಧುರವಾಸನೆಯ ಮಲ್ಲಿಗೆಯ ಗೊಂಚಲೇ ಸಂಕೇತ ವಾಯಿತು. ಇಬ್ಬರ ನೋಟ ಸೇರಿತು.

ಕೇಳಿದಳು ಆ ಸುಂದರಿ, ಇವನ ಈ ಬೂಟಾಟಿಕೆಯ ವೇಷ, ಭೂಷಣ ಗಳಿಗೆ ಕಾರಣವನ್ನು ; ಕೇಳಿದನು ಈ ಪ್ರೇಮಿ, ಅವಳ ಅಕಾಲ ವೈರಾಗ್ಯದ ಕಾರಣವನ್ನು. ಪರಸ್ಪರ ಅಂತರಂಗಗಳು ಒಂದಾದವು. ಪಲಾಯನ ಮಾಡಿತು ಇಬ್ಬರ ನೆರವನ್ನೂ ಆಶ್ರಯಿಸಿದ್ದ ಆ ದುರ್ಬಲ ವೈರಾಗ್ಯ. ಪ್ರಥಮ ಸಂದರ್ಶನ ದಿಂದಲೇ ಇಬ್ಬರೂ ಪರಸ್ಪರ ಇಂಗಿತಗಳನ್ನು ಅರಿತರು. ಹೆಚ್ಚು ಕಾಲ ಮಾತಾಡಲು ಗುರುಗಳ ನೆನಪು ಅಡ್ಡ ಬಂದಿತು. ಸಂಜೆ ಪುನಃ ಸಂದರ್ಶಿಸಲು ಹೇಳಿ, ಹೊರ ಬಂದ ಸಂಗಯ್ಯ.

ಆ ಸಂಜೆ, "ಈ ಪ್ರೇಮಿಗಳ ಸಂದರ್ಶನಕ್ಕೆ ನಾವೇಕೆ ಅಡ್ಡಿಪಡಿಸಬೇಕು" ಎಂದೋ ಏನೋ, ಎಲ್ಲಾ ಮೋಡಗಳೂ ದೂರವಾಗಿ, ಬೆಳುದಿಂಗಳಿನ ಕಾಂತಿಗೆ ಯಾವ ಕುಂದೂ ಇಲ್ಲದೆ, ಆಗಸ ನಿರ್ಮಲವಾಗಿತ್ತು. ತಾರೆಗಳು ಮಿನುಗಲುಪ ಕ್ರಮಿಸಿದುವು. ಪಶ್ಚಿಮದ ದಿಗಂತದಲ್ಲಿ ರವಿಯು, ಪ್ರೇಮಿಗಳ ಮನದ ಹಂಬಲ ಬೇಗ ಪೂರೈಸಲಿ ಎಂದೋ ಏನೋ, ಮರೆಯಾಗಿದ್ದನು. ಇಂದುವಿನ ಪ್ರಕಾಶ ಕ್ಷಣಕ್ಷಣಕ್ಕೂ ಹೆಚ್ಚಾಗುತ್ತಿತ್ತು. ಮಠದ ಉದ್ಯಾನವನದ ಒಂದು ಮೂಲೆಯಲ್ಲಿ ಯಾರೂ ಬಾರದೆ ಇರುವ ಸ್ಥಳದಲ್ಲಿ ಒಂದು ಕಲ್ಲುಪಾವಟಿಗೆಯ ಮೇಲೆ ಕುಳಿತು, ತನ್ನ ಪ್ರೇಯಸಿಗಾಗಿ ಕಾದಿದ್ದ ಸಂಗಯ್ಯ. ತಣ್ಣನೆ ಗಾಳಿ ಬೀಸುತ್ತಿತ್ತು. ಪ್ರಕೃತಿಯ ಸೌಂದರ್ಯವನ್ನು ವೀಕ್ಷಿಸುತ್ತಾ ವನರಾಣಿ ಹಿಮ್ಮೆಯಿಂದ ಬರುವಂತೆ, ಬಂದಳು, ಸುಂದರಿ, ತನ್ನ ಇನಿಯನನ್ನು ಕಾಣಲು. ಪ್ರೇಯಸಿಗಾಗಿ ಕಾಯುತ್ತಿದ್ದ ಸಂಗಪ್ಪ ತನ್ನ ಮನೋರಮೆ ಬರುತ್ತಿರುವಾಗಲೇ ಎದ್ದು ಸ್ವಾಗತಿಸಿದ. ಹರಿಣಿ ಯಂತೆ ಹೆದರಿ ಕೇಳಿದಳು ಆ ಚೆಲುವೆ," ಯಾರಾದರೂ ನಮ್ಮನ್ನು ನೋಡಿದರೆ ?" ಎಂದು.

" ಯಾರೂ ಈ ವೇಳೆಯಲ್ಲಿ ಸುಳಿಯಲಾರರು ಇಲ್ಲಿ" ಎಂದು ಧೈರ್ಯ ಹೇಳಿದನು ಸಂಗಪ್ಪ. ಸರಸ ಸಂಭಾಷಣೆ ನಡೆಯಿತು. ತಂಪಾದ ಗಾಳಿ ಬೀಸಿ ಅವರನ್ನು ಆನಂದಪರವಶರನ್ನಾಗಿ ಮಾಡಿತು. ಆದರೆ ಅಷ್ಟರಲ್ಲಿ ಯಾವುದೋ ಸ್ಪಷ್ಟಾಸ್ಪಷ್ಟಶಬ್ದ ಇವರ ಕಡೆ ಬರುತ್ತಿತ್ತು. ಆ ಸದ್ದು ಯಾವುದೆಂಬುದನ್ನು ಪ್ರಣಯಿಗಳು ಅರಿಯದಾದರು. ಸದ್ದು ಹತ್ತಿರವಾಯಿತು. ಕಂಡಿತು ಸಿದ್ಧ ರಾಮನ ಆಕೃತಿ. ನಡುಗಿದರು ಪ್ರೇಮಿಗಳು. ಗುರುಗಳ ಬಾಯಿಂದ ಶಾಂತ ವಾದ ನುಡಿಗಳು ಹೊರಟವು. ಬಸವಣ್ಣನವರ ವಚನದಂತೆ," ಸತಿಪತಿಗಳೊಂದಾದ

ಕ್ತಿ ಹಿತವಾಗಿಪ್ಪುದು ಶಿವಗೆ" ಎಂದು ನುಡಿದು, "ನೀವೂ ಸಹ ನಿಮ್ಮ ಯುಸ್ಸಿನ ಸಹಜತೆಗೆ ತಕ್ಕಂತೆ ನಡೆದಿದ್ದೀರಿ. ನಿಮ್ಮ ಯೌವನದಲ್ಲಿ ಮನಸ್ಸಿನ ಕಾಂಕ್ಷೆಯನ್ನು ಗೆಲ್ಲಲು ನಿಮ್ಮ ಆಯುಸ್ಸನ್ನು ವ್ಯಾಸಲಾಗಿರಿಸಿ, ಶಿವಯೋಗಕ್ಕೆ ಾಲವಿಲ್ಲದಂತೆ ಪರಲೋಕ ಯಾತ್ರೆ ಮಾಡುವುದಕ್ಕಿಂತ, ಸಂಸಾರಿಗಳಾಗಿ ಂಸಾರ ಸುಖದಿಂದ ತೃಪ್ತಿಹೊಂದಿ, ನಿಮ್ಮ ಜೀವನ ಸಾರ್ಥಕತೆಗೆ ಗೃಹಸ್ಥ ಾಗಿಯೂ ಶಿವಯೋಗವನ್ನು ಮಾಡಬಹುದು" ಎಂದು ಹೇಳಿದ್ದಲ್ಲದೆ, ತಮ್ಮ ಪ್ತ ಶಿಷ್ಯ ಕಲ್ಲಯ್ಯನಿಂದ ಸಂಗಯ್ಯ-ಚೆನ್ನವ್ವೆಯರ ಸಂಸಾರ ಯೋಗಕ್ಕೆ ಹಣ ಹಾಯ ಮಾಡಿಸುವುದಾಗಿ ಹೇಳಿ, ಅಲ್ಲಿಂದ ಮುಂದೆ ನಡೆದು ಹೋದರು.

ಗುರುಗಳ ಆಶೀರ್ವಾದ ಪಡೆದು ಸಂಗಯ್ಯ-ಚೆನ್ನವ್ವೆಯರು 'ಸಂಸಾರ ಯೋಗ'ದ ದೀಕ್ಷೆ ಪಡೆದು, ಸಿದ್ಧರಾಮನ ಮಠದಿಂದ ಹೊರಬಂದರು.

ಬಹುಕಾಲದ ಮೇಲೆ, ತಾನೇ ಹಾಡಿದ 'ಸಂಸಾರವೆಂಬುದು ಗಾಳಿ ಗೊಡ್ಡಿದ ಸೊಡರು' ಎಂಬ ವೈರಾಗ್ಯವಚನದ ಸತ್ಯ, ತತ್ವ, ಚೆನ್ನವ್ವೆಗೆ ಅರ್ಥ ವಾಯಿತು. ಆಕೆಯ ಪ್ರಿಯ ಅವಳಿಗೊಂದು ಮಗುವನ್ನು ಕರುಣಿಸಿ ಕಣ್ಣು ಮುಚ್ಚಿಕೊಂಡಿದ್ದ. ಐದು ವರ್ಷಕಾಲ ಆ ಮಗು ಅವಳ ಬಾಳನೌಕೆಗೆ ಪಟ ವಾಗಿದ್ದು, ಅದೂ ಹರಿದುಹೋಯಿತು. ದಿಕ್ಕುಗಾಣದ ಅನಾಥೆ ಚೆನ್ನವ್ವೆ 'ಪಾವಾಡ ಪುರುಷ'ನೆಂದು ಖ್ಯಾತಿಗೊಂಡ ಸಿದ್ಧರಾಮನ ಬಳಿಗೆ ಬಂದು, ಮಗು ವನ್ನು ಬದುಕಿಸಿ ಕೊಡಿ ಎಂದು ಬೇಡಿದಳು. ಆದರೆ, ಗುರುವಿನಿಂದ ದೊರೆತದ್ದು ಅವಳಿಗೆ ಶಿಶುವಲ್ಲ, ನಿಜವಾದ ವೈರಾಗ್ಯದ ದೀಕ್ಷೆ. ಗುರುವಿನ ಅನುಗ್ರಹದಿಂದ ಸಂಸಾರಯೋಗವನ್ನು ಸಂಗಯ್ಯನೊಂದಿಗೆ ಪೂರ್ಣವಾಗಿ ಅನುಭವಿಸಿ, ಶಿವ ಯೋಗದ ಪಥ ಹಿಡಿದಳು ಚೆನ್ನವ್ವೆ.

—ಎಂ. ವಿ. ರಾಮಸ್ವಾಮಿ
(Pu.C.,P.)

ತೆ

——

# ಬಿಲ್ಲೇಶ ಬೊಮ್ಮಯ್ಯ

ಸಿದ್ಧರಾಮನ ಶಿಷ್ಯರಲ್ಲಿ ಬಿಲ್ಲೇಶ ಬೊಮ್ಮಯ್ಯನೆಂಬವನು ಒಬ್ಬನು ಈತನು ಮೊದಲು ಬಡತನದ ದವಡೆಗೆ ಸಿಕ್ಕಿ, ದಾಯಾದಿಗಳ ಬಳಿ ಸಾಲಮಾಡಿ ಅವರ ಹಿಂಸೆಗೆ ಹೆದರಿಕೊಂಡು ಸೊನ್ನಲಿಗೆಗೆ ಓಡಿ ಬಂದು ಸಿದ್ಧರಾಮನ ಶಿಷ್ಯವಗ ದಲ್ಲಿ ಒಬ್ಬನಾಗಿ ಸೇರಿಕೊಂಡನು. ಜಂಗಮವೇಷದಲ್ಲಿದ್ದ ಅವನನ್ನು, ಸಾಲಗಾ ರಲ್ಲಿ ಕೆಲವರು ಹಿಡಿದು ಸಾಲದ ಹಣ ಸಲ್ಲಿಸುವಂತೆ ಪೀಡಿಸಿದರು. ಅವನ ತಾನು ಸಿದ್ಧರಾಮನ ಪಾದ ಸೇವಕನೆಂದೂ, ತಾನೇನೂ ಕೊಡಬೇಕಾಗಿಲ್ಲವೆಂದೂ ಎದುರಾಡುತ್ತಿದ್ದನು. ಕಲಹದ ಕಾರಣವನ್ನು ವಿಚಾರಿಸ ಬಂದ ಕಲ್ಲಯ್ಯನ ಸೂಚನೆಯಂತೆ, ಸಾಲಗಾರರೆಲ್ಲರೂ ಸಿದ್ಧರಾಮನಲ್ಲಿಗೆ ಹೋಗಿ, ಮೊರೆ ಇಟ್ಟು ಇದ್ದ ಸಂಗತಿಯನ್ನು ತಿಳಿಸಿದರು. ಆಗ ಸಿದ್ಧರಾಮನು ಬೊಮ್ಮಯ್ಯನನ್ನು ಕರೆಯಿಸಿ, "ನೀನು ಇವರಿಗೆ ಕೊಡಬೇಕಾದ ಹಣವನ್ನೆಲ್ಲಾ ಕೊಟ್ಟುಬಿಡು" ಎಂದು ಕೇಳಿದಾಗ, ತಾನು ಸಾಲ ಕೊಡಬೇಕಾಗಿರಲಿಲ್ಲವೆಂದೂ, ಸುಮ್ಮನೆ ಅವರು ತನ್ನ ಮೇಲೆ ಸಾಲದ ಹೊರೆ ಹೊರಿಸುತ್ತಿದ್ದಾರೆಂದೂ ಬೊಮ್ಮಯ್ಯ ಹೇಳಿದನು ಅದಕ್ಕೆ ಸಿದ್ಧರಾಮನು, "ಏನು, ಪ್ರಮಾಣ ಮಾಡಿ ಹೇಳುವಿಯೋ ?" ಎಂದು ಕೇಳಿದರು. ನ್ಯಾಯವಾದಿಯ ಸ್ವರವನ್ನು ನಟಿಸುತ್ತಾ ಬೊಮ್ಮಯ್ಯ ಹೇಳಿದ "ಇಲ್ಲ ಅಣ್ಣನವರೆ....ಪ್ರಮಾಣವನ್ನೂ ಮಾಡುವುದಿಲ್ಲ ; ಗಂಟನ್ನೂ ಕೊಡುವು ದಿಲ್ಲ." ಸಿದ್ಧರಾಮ ಚಕಿತನಾದನು ; ಕಲ್ಲಯ್ಯ ಅಪ್ರತಿಭನಾದನು ! ಕೊನೆಗೆ ಸಿದ್ಧರಾಮನು, "ಈತ ಗುರುವಿನ ಆಜ್ಞೆಯನ್ನು ಮೀರಿದವನು....ಇವನಿಗಿಲ್ಲಿ ಇನ್ನು ಪ್ರವೇಶವಿಲ್ಲ. ನೀವು ಯಾವ ಧರ್ಮಾಧಿಕರಣಕ್ಕಾದರೂ ಎಳೆದುಕೊಂಡು ಹೋಗಿ ನಿಮ್ಮ ಹಣವನ್ನು ಪಡೆದುಕೊಳ್ಳಿ" ಎಂದು ನುಡಿದು, ಎದ್ದು, ಗಂಭೀರ ವಾಗಿ ಮಠದ ಒಳಕ್ಕೆ ಹೊರಟುಹೋದನು.

ಸಂಜೆಯಾಗುತ್ತಿತ್ತು. ಊರಾಚೆಯ ಪಾಳು ದೇಗುಲದ ಮುರುಕು ಜಗಲಿಯ ಮೇಲೆ ಚಿಂತಾಕ್ರಾಂತನಾಗಿ ಬೊಮ್ಮಯ್ಯ ಕುಳಿತಿದ್ದನು. ಅವನ ಕಣ್ಣುಗಳ ತುಂಬ ನಿರಾಸೆಯ ಕರಿ ನೆರಳು ಮನೆ ಮಾಡಿತು. ಶೂನ್ಯವಾದ

ನೋಟದಿಂದ ರಕ್ತ ರಂಜಿತವಾಗುತ್ತಿದ್ದ ಪಡುವಣ ದಿಗಂತವನ್ನು ದಿಟ್ಟಿಸುತ್ತಾ ಕುಳಿತಿದ್ದನು.

ಅವನೀಗ ಸಿದ್ಧರಾಮನ ಶಿಷ್ಯನಲ್ಲ. ನಾಲ್ಕುಸಾವಿರ ಸಮರ್ಥ ಶಿಷ್ಯರ ನೆರವಿಯಲ್ಲಿ ಸೇರಿ, ದಿನಕ್ಕೊಂದು ಕೆಲಸ ಮಾಡುವ ಪುಣ್ಯ ಇನ್ನಿಲ್ಲವಾಯಿತು. ಆ ಗುರು, ಕರುಣೆಯ ಮೂರ್ತಿ, ಆ ಸ್ಫೂರ್ತಿಯ ಸೆಲೆ ಇನ್ನಿಲ್ಲ. ಯಾವ ಪೂರ್ವ ಜನ್ಮದ ಸುಕೃತದಿಂದಲೋ, ನಾಲ್ಕು ದಿನ ಈ ಶಕ್ತಿಯ ಹೊಳೆಯಲ್ಲಿ ತೇಲಿದ್ದಾಯಿತು. ಈಗ ಮತ್ತೆ ದಡಕ್ಕೆ ಬಂದು ಈ ದೇಹ ಬಿದ್ದಿತು. ಇನ್ನು ಯಾವ ಪ್ರವಾಹ ಬಂದು ಇದನ್ನು ತನ್ನೊಳಗೆ ಎಳೆದುಕೊಂಡು ತೇಲಿಸೀತು!

ಬೊಮ್ಮಯ್ಯನ ಕಣ್ಣು ಹನಿಗೂಡಿದವು. ದೂರದಲ್ಲಿ ನಿಂತ ಈಚಲು ಮರಗಳು ತಲೆಗೆದರಿ ನಿಂತ ಯಮದೂತರಂತೆ ತೋರಿದವು. ದೂರ ದೂರದವರೆಗೆ ಬೋಳು ಬಯಲು ತನ್ನ ಮನಸ್ಸಿನ ಶೂನ್ಯತೆಯಂತೆ ಹರಡಿತ್ತು. ಸಂಜೆಯ ಬಾನೆಲ್ಲಾ ಕೆಂಪಾಗಿ, ಬಿರುಗಾಳಿಗೆ ಸಿಕ್ಕಿ ಚೂರು ಚೂರಾಗಿ ಚದರಿದ ಮೋಡಗಳಿಂದ ಅಸ್ತವ್ಯಸ್ತ ರುದ್ರವಾಗಿತ್ತು. ಹಿಂದೆ ಅನತಿ ದೂರದಲ್ಲಿದ್ದ ಸೊನ್ನಲಿಗೆಯ ಗುಡಿ ಗೋಪುರಗಳು ಗತಕಾಲದ ಕನಸುಗಳಂತೆ ಮರವೆಯ ಕತ್ತಲಿಗೆ ಮುಳುಗುತ್ತಿದ್ದವು.

ಬಿಲ್ಲೇಶ ಬೊಮ್ಮಯ್ಯ ಮನಸ್ಸಿನಲ್ಲಿ ಗತಕಾಲದ ಸುಖದುಃಖಗಳ ಮೆರವಣಿಗೆ ಕಂಡು ಮಾಯವಾಯಿತು. ಆಗಲೇ ಹೊತ್ತು ಮುಳುಗಿತ್ತು; ಮೆಲ್ಲ ಮೆಲ್ಲನೆ ಕತ್ತಲು ಇಳಿಯತೊಡಗಿತ್ತು. ರೊಯ್ಯನೆ ಬೀಸುವ ಸಂಜೆಗಾಳಿ ಪಾಳು ದೇಗುಲದಲ್ಲಿ ವಿಕಟನಾದವನ್ನು ಸೃಜಿಸುತ್ತಿತ್ತು. ಬೊಮ್ಮಯ್ಯನ ಮನವೂ, ತಾನು ಕುಳಿತು ಚಿಂತಿಸುತ್ತಿದ್ದ ಪಾಳು ದೇಗುಲದಂತೆಯೇ ಭಗ್ನವಾಗಿತ್ತು! ಇಂದು ಮುಂದಿನ ದಾರಿ? ಅದು ಸ್ಪಷ್ಟ; ಭೀಕರ. ಮುಂದಿನ ದಾರಿ, ಕೊನೆಯ ದಾರಿ; ಮರಣ. ಈ ಎಲ್ಲಾ ಅಪಮಾನಕ್ಕೆ, ಈ ದಾರಿದ್ರ್ಯದ ಕೋಟಲೆಗೆ, ಮದ್ದು; ಈ ಗುರುದ್ರೋಹಕ್ಕೆ ತಕ್ಕ ಪ್ರಾಯಶ್ಚಿತ್ತ.

ಬೊಮ್ಮಯ್ಯ ಮೇಲೆದ್ದ. ಪಾಳು ದೇಗುಲದ ಒಳಕ್ಕೆ ನಡೆದ. ನಾಲ್ಕಾರು ಬಾವಲಿಗಳು ಪಟಪಟನೆ ರೆಕ್ಕೆ ಬಡಿದು ಹೊರಕ್ಕೆ ಹಾರಿಬಂದುವು. ಹಳೆಯ ಕೊಳಕಿನ ಶುದ್ಧ ದುರ್ಗಂಧ, ತೀಡುತ್ತಿತ್ತು. ಮೇಲಿನ ಗವಾಕ್ಷದಲ್ಲಿ ಮಾಸಿ ಬಣ್ಣಗುಂದುತ್ತಿದ್ದ ಸಂಜೆಯ ಬಾನು ನರಕದ ನಗೆಯಂತೆ ತೋರಿತು. ಗಾಳಿ ರೊಯ್ಯನೆ ಬೀಸುತ್ತಿತ್ತು; ದೂರದಲ್ಲಿ ಸೊನ್ನಲಿಗೆ ಕತ್ತಲಲಿ ಕರಗುತ್ತಿತ್ತು.

ಮೊದಲೇ ಸಿದ್ಧನಾಗಿ ಬಂದಿದ್ದ ಬೊಮ್ಮಯ್ಯ ಕತ್ತಿಯೊಂದನ್ನು ಗೋ
ಯಲ್ಲಿ ನಟ್ಟ. ಒಂದು ಸಲ ಸೊನ್ನಲಿಗೆಯತ್ತ ಕೈಮುಗಿದ. ದೂರದ ಕೆರೆಯ
ಸಪ್ಪಳ ಕೇಳಿಬಂತು. ಅಣ್ಣನವರ ಗುಂಪಿನಲ್ಲಿ ಸಾವಿರಾರು ಶಿಷ್ಯಂದಿರೊಡ
ದೈನಂದಿನ ಕರ್ಮದಲ್ಲಿ ತೊಡಗುತ್ತಿದ್ದ ಚಿತ್ರ ಸುರುಳಿಸುರುಳಿಯಾಗಿ ಬಿಚ್ಚಿತು
ಗೋಳ್ದನಿಯಿಂದ ಗಾಳಿಯ ಧ್ವನಿ ಮೊರೆಯಿತು. ಸಾವು, ಬಹು ದೂರದಿಂ
ಕೂಗುತ್ತಿರುವಂತೆ ಭಾಸವಾಯಿತು. ಹೊರಗಾಗಲೇ ಕತ್ತಲು ಕವಿದಿತ್ತು. ಗೋ
ಯಲ್ಲಿ ನಟ್ಟ ಕತ್ತಿ ತನ್ನ ಹೊಳಪಿನಿಂದ ಇವನನ್ನೇ ಇರಿಯುವಂತೆ ನೋಡುತ್ತಿತ್ತು
ಈ ಪಾಪಿಗೆ ಕಡೆಗೂ ಪ್ರಾಯಶ್ಚಿತ್ತ ಇದೇ; ಅಣ್ಣನವರಿಗೆ ತಾನು ಮಾಡಿ
ದ್ರೋಹವನ್ನು ಬಗೆಹರಿಸುವ ವಿಧಾನ ಇದೇ—ಎಂದುಕೊಂಡ. ಕಡೆಯದಾಗಿ
ಈ ದೀನನನ್ನು ಈಗಲಾದರೂ ಕರೆದುಕೋ ಎಂದು ಸಾವಿಗೆ ಮೊರೆ ಇಟ್ಟ
ದೃಢ ನಿರ್ಧಾರದಿಂದ, ನೇರವಾಗಿ ಆ ಕೂರಲಗಿನ ಮೊನೆಗೆ ದೂರದಿಂದ ಓಡಿಬಂದ
ಡಿಕ್ಕಿ ಹೊಡೆದ.

ಆ ಕೂರಲಗು ಬಿಲ್ಲೇಶ ಬೊಮ್ಮಯ್ಯನ ಎದೆಯನ್ನು ಬಗಿದು ಬೆನ್ನ
ಕಾಣಿಸಿಕೊಂಡಿತು. ರಕ್ತದ ಬುಗ್ಗೆ ಚಿಲ್ಲನೆ ಹಾರಿ ಪಾಳು ಗುಡಿಯ ಭಗ್ನಪೀಠಕ
ಅಭಿಷೇಕವಾಯಿತು. ನಾಲ್ಕು ಚಣ ಒದ್ದಾಡಿದ ಆ ದೇಹ ಕಡೆಗೆ ಸುಮ್ಮನಾ
ಯಿತು. ನಾಲ್ಕಾರು ಬಾವಲಿಗಳು ಪಟಪಟನೆ ರೆಕ್ಕೆ ಬಡಿದು, "ಕೀ, ಕೀ
ಎಂದು ದನಿ ಮಾಡಿದವು. ಗಾಳಿ ಎಂದಿನಂತೆ ನೀಳ್ದ ಗೋಳ್ದನಿಯಿಂದ ತೆರೆದ
ನಿಂತಿತು.

ವಿಷ ಮೂರ್ಛಿತವಾದಂತೆ ಜಗತ್ತೆಲ್ಲಾ ಕಾರ್ಗತ್ತಲಲ್ಲಿ ಕರಗಿಹೋಯಿತು
ನಿರಂತರ ನರಳುವಿಕೆಯ ಸಂಕೇತದಂತೆ ದೂರದಲ್ಲಿ ನಾಯಿಯೊಂದು ಮುಗಿಲೆಡೆ
ಮೊಗವೆತ್ತಿ ಹುಯ್ಯಲಿಡತೊಡಗಿತ್ತು.

ತನ್ನ ಬದುಕಿನಲ್ಲಿ ಸಿದ್ಧರಾಮನಂತಹ ಕರುಣಾಮೂರ್ತಿಯ ಕರುಣೆ
ಅಪಾತ್ರನಾಗಿದ್ದ ಬಿಲ್ಲೇಶನು ಗುರುದ್ರೋಹಿಯಾಗಿ ಸತ್ಯಭ್ರಷ್ಟನಾಗಿ ನರಕಕ
ಇಳಿದರೂ, ಸಿದ್ಧರಾಮನ ಶಿಷ್ಯನಾಗಿದ್ದ ಕಾರಣ ಆ ಗುರುವಿನ ಕರುಣೆಯಿಂ
ಸದ್ಗತಿ ಪಡೆದನು. ಸಿದ್ಧರಾಮನ ಮಹಿಮೆಯನ್ನು ಮೆರೆಯಲು ಸಾಧಕವಾಗಿ
ಬಿಲ್ಲೇಶ ಬೊಮ್ಮಯ್ಯನ ಈ ಪ್ರಕರಣ.

—ಡಿ. ಪಿ. ರಾಮಕೃಷ್
(Pu.C.,S.)

———

# ಶಿವನಂಜೇ ಗೌಡ-ನರಹರಪ್ಪ

## ಇವರ ಸ್ನೇಹಚಿತ್ರ

'ಚಂದವಳ್ಳಿಯ ತೋಟ' ಕಾದಂಬರಿಯಲ್ಲಿ ಕಾಣುವ ಪ್ರಧಾನ ವ್ಯಕ್ತಿ ಶಿವನಂಜೇ ಗೌಡ. ಆತ ಆ ಹಳ್ಳಿಯ ಹಿರಿಯಾಳು. ಆತನಲ್ಲಿ ಅನೇಕ ಸದ್ಗುಣಗಳಿದ್ದುವು. ಒಬ್ಬೊಬ್ಬ ವ್ಯಕ್ತಿಯಲ್ಲಿ ಒಂದೊಂದೂ ಕಾಣದ ಸತ್ಯ, ಧರ್ಮ, ತ್ಯಾಗ, ನ್ಯಾಯ ನಿಷ್ಠೆ, ಹಿಡಿದ ಕಾರ್ಯವನ್ನು ಸಾಧಿಸುವ ಬುದ್ಧಿ, ಉಜ್ವಲ ದೇಶಾಭಿಮಾನ, ನಿರ್ಮಲವಾದ ನಡತೆ, ದೈವಭಕ್ತಿ ಇವೇ ಮುಂತಾದ ನಾನಾ ಗುಣಗಳು ಶಿವನಂಜೇಗೌಡನಲ್ಲಿ ತುಂಬಿದ್ದುವು.

ಶಿವನಂಜೇ ಗೌಡನು ತನ್ನ ಹಳ್ಳಿಯಲ್ಲಿ ಅಧರ್ಮ, ಮೋಸ, ಕಳ್ಳತನ ಇವೇ ಮುಂತಾದುವುಗಳು ನಡೆಯುವುದಕ್ಕೆ ಅವಕಾಶ ಕೊಡದೆ ಆ ಹಳ್ಳಿಯನ್ನು ಪರಿಪಾಲಿಸುತ್ತಿದ್ದನು. ಜನರ ಅಭ್ಯುದಯವೇ ತನ್ನ ಅಭ್ಯುದಯವೆಂದು ಭಾವಿಸಿದ್ದನು. ಜನರ ಸೌಖ್ಯಕ್ಕಾಗಿ, ತನ್ನ ಒಂದೇ ಒಂದು ಗದ್ದೆಯನ್ನು ತೋಟಕ್ಕಾಗಿ ದಾನ ಮಾಡುತ್ತಾನೆ. ತನ್ನ ಹಳ್ಳಿಯ ಪ್ರಜೆಗಳು ಸುಖ ಸಂತೋಷಗಳಲ್ಲಿ ತಲ್ಲೀನರಾಗಿರಬೇಕೆಂದು ಸ್ವತಃ ತಾನೇ ಹಣವನ್ನು ವಿನಿಯೋಗಿಸಿ, ಬಾವಿಯನ್ನು ತೆಗೆಯಿಸಿ, ತನ್ನ ಬೆವರನ್ನು ಸುರಿಸಿ, ತೋಟವನ್ನು ಬೆಳೆಸುತ್ತಾನೆ. ತನ್ನ ಹಳ್ಳಿಯ ರೈತರ ಸೌಕರ್ಯಕ್ಕಾಗಿ ಒಂದು ಜೋಯಿಸರ ಸಂಸಾರವನ್ನು ಆ ಹಳ್ಳಿಗೆ ಕರೆಸಿ, ಅವರಿಗೆ ಬೇಕಾದ ಮನೆ ಹೊಲ ಮುಂತಾದ ಸಕಲ ಸೌಕರ್ಯಗಳನ್ನೂ ಕಲ್ಪಿಸಿಕೊಡುತ್ತಾನೆ.

ಶಿವನಂಜೇಗೌಡನದು ಮಗುವಿನಂತಹ ಮುಗ್ಧ ಹೃದಯ; ಬೆಳ್ಳಗಿರುವುದೆಲ್ಲ ಹಾಲೆಂದು ನಂಬುವ ಶಿಶು ಸ್ವಭಾವ ಆತನನು. ತನ್ನಂತೆಯೇ ಎಲ್ಲರೂ ಎಂದು ಭಾವಿಸಿದ್ದ. ತನ್ನ ಅತಿ ಸೌಜನ್ಯದ ಫಲವಾಗಿ ತಾನೇ ನಾಶವಾದನು. ಈತನು, ಮಹಾಪುಂಡನೆಂದು ಹೆಸರು ಪಡೆದಿದ್ದ ಕರಿಯಪ್ಪನನ್ನು ಒಳ್ಳೆಯ ಮಾರ್ಗದಲ್ಲಿ ಹೋಗುವಂತೆ ಪ್ರೋತ್ಸಾಹಿಸಿ ಹಳ್ಳಿಯ ಜನರಿಂದ ದೂರವಾಗಿದ್ದ ಆತನನ್ನು ಮತ್ತೆ ಹಳ್ಳಿಗೆ ಸೇರಿಸಿ ಸದ್ಗುಣವಂತನನ್ನಾಗಿ ಮಾಡಬೇಕೆಂದು ಬಹು

ವಾಗಿ ಪ್ರಯತ್ನಪಟ್ಟ. ತನ್ನ ಆಸ್ತಿ, ಸಂಪತ್ತು, ತಾನು ಎಲ್ಲಾ ಅನ್ಯರ ಉಪಕಾರಕ್ಕಾಗಿ ಎಂದು ಹೇಳುತ್ತಾನೆ. 'ಕೆರೆಯಲ್ಲಿ ನೀರಿರುವುದು ದನ ಕುಡಿಯುವುದಕ್ಕೆ, ಬೆಳೆ ಬೆಳೆಯುವುದಕ್ಕೆ' ಎನ್ನುತ್ತಾನೆ. ಈತನ ಮನಸ್ಸು ಅತ್ಯಂತ ಉದಾರವಾದದ್ದು. ಆದುದರಿಂದಲೇ ಚಂದವಳ್ಳಿಗೆ ಬರುವವರೆಲ್ಲರೂ ಇವನಲ್ಲಿಯೇ ಆತಿಥ್ಯವನ್ನು ಸ್ವೀಕರಿಸಿ ಮನಸಾರೆ ಹೊಗಳಿ ಈತನ ಉದಾರತ್ವಕ್ಕೆ ತಲೆದೂಗಿ ಹೋಗುತ್ತಿದ್ದರು. ಶಿವನಂಜೇಗೌಡನು ಅವಿದ್ಯಾವಂತನಾದರೂ ಆತನಲ್ಲಿ ಅತ್ಯುತ್ತಮ ಸಂಸ್ಕೃತಿ ಇತ್ತು.

ಶಿವನಂಜೇಗೌಡನಿಗೆ ಅತ್ಯಂತ ಪ್ರಿಯ ಸ್ನೇಹಿತನೆಂದರೆ ನರಹರಪ್ಪ. ಚಂದವಳ್ಳಿಯಲ್ಲಿದ್ದ ಒಂದೇ ಒಂದು ಬ್ರಾಹ್ಮಣ ಕುಟುಂಬ ಈತನದು. ಈತನಿಗೆ ಸ್ವಲ್ಪಮಟ್ಟಿಗೆ ಜ್ಯೋತಿಷ್ಯವೂ ತಿಳಿದಿತ್ತು. ಈತನು ತಕ್ಕಮಟ್ಟಿಗೆ ವಿದ್ಯಾವಂತನಾದುದರಿಂದ ಈತನನ್ನೂ ಹಳ್ಳಿಯ ಹಿರಿಯರ ಸಾಲಿಗೆ ಸೇರಿಸಬಹುದಾಗಿತ್ತು. ಹಳ್ಳಿಯ ಜನರ ಕಲ್ಯಾಣವೇ ತನ್ನ ಕೀರ್ತಿ ಎಂದು ನಂಬಿದ್ದ.

ನರಹರಪ್ಪ, ಗೌಡ ಇವರಿಬ್ಬರೂ ಚಂದವಳ್ಳಿಯ ಎರಡು ಕಣ್ಣುಗಳು. ಇಬ್ಬರ ದೇಹವು ಬೇರೆಯಾಗಿದ್ದರೂ ಇಬ್ಬರ ಹೃದಯಗಳು ಒಂದೇ ಎನ್ನುವ ವಿಧದಲ್ಲಿ ವರ್ತಿಸುತ್ತಾ ಜನರ ಕಲ್ಯಾಣದಲ್ಲಿ ಭಾಗವಹಿಸಿದ್ದರು. ನರಹರಪ್ಪ ಗೌಡನಿಗೆ ನೆರಳಿನಂತೆ ಸಹವರ್ತಿಯಾಗಿದ್ದು, ಅವನ ಕಷ್ಟ ಸುಖಗಳಲ್ಲಿ ತಾನೂ ಭಾಗಿಯಾಗುತ್ತಿದ್ದನು. ಇವರಿಬ್ಬರ ಮಿತ್ರತ್ವವನ್ನು ಮಹಾಭಾರತದ ಕೃಷ್ಣಾರ್ಜುನರ ಮೈತ್ರಿಗೆ ಹೋಲಿಸಬಹುದು. ಚಂದವಳ್ಳಿಯಲ್ಲಿ ಒಂದು ತೋಟವನ್ನು ಬೆಳಸಬೇಕೆಂದು ಗೌಡನ ಅಚಲ ನಿರ್ಧಾರವನ್ನರಿತು, ಗೌಡನ ಬತ್ತದ ತಾಕಿನಲ್ಲಿ ಅದನ್ನು ಬೆಳೆದರೆ ಬೆಳೆಯಬಹುದೆಂದು ಹೇಳಿ, ನಾಲ್ಕು ಸಸಿ ಹಾಕುವಂತೆ ಸಲಹೆಯನ್ನಿತ್ತನು. ತೋಟವನ್ನು ಮಾಡುವಾಗ ಅದರಿಂದ ಮುಂದೆ ರಕ್ತಪಾತವಾಗುವ ಸಂಭವವಿದೆಯೆಂದು ಜೋಯಿಸರು ಹೇಳಿದ ಮೇಲೆ, ಈ ಕಾರ್ಯಕ್ಕೆ ಪ್ರಯತ್ನಪಡುವುದೇ ಬೇಡವೆನ್ನಿಸಿತು ನರಹರಪ್ಪನಿಗೆ. ಜೋಯಿಸರು ತೋಟವನ್ನು ಅನ್ಯರ ಹೆಸರಿಗೆ ಮಾಡಿದರೆ ಯಾವ ಅನಾಹುತವೂ ಜರುಗುವುದಿಲ್ಲವೆಂದು ತಮ್ಮ ಅಭಿಪ್ರಾಯವನ್ನು ವಿವರಿಸಿದಾಗ, ಶಿವನಂಜೇಗೌಡನು ನರಹರಪ್ಪನ ಹೆಸರಿಗೆ ಮಾಡಿಕೊಡಲು ನಿರ್ಧಾರವನ್ನು ಕೈಗೊಳ್ಳುತ್ತಾನೆ. ಆದರೆ ನರಹರಪ್ಪನು ಗೌಡನ ಈ ನಿರ್ಧಾರಕ್ಕೆ ಸಮ್ಮತಿಸುವುದಿಲ್ಲ. ಇದರ ವಿಷಯವಾಗಿ ಇವರಿಬ್ಬರಿಗೂ ದೊಡ್ಡ ವಾಗ್ಯುದ್ಧವೇ ನಡೆಯಿತು. ಅಂತಿಮವಾಗಿ ನರಹರಪ್ಪನು ಯತ್ನವಿಲ್ಲದೆ ಗೌಡನಿಂದ ಆತನ ಜಮೀನನ್ನು ಪಡೆದು ಆದಕ್ಕೆ ಪ್ರತಿಯಾಗಿ ತನ್ನ ಜಮೀನನ್ನು ಕೊಟ್ಟನು.

ನರಹರಪ್ಪನು ಗೌಡನನ್ನು ಅನೇಕ ಕಷ್ಟಗಳಿಂದ ಸರ್ವ ವಿಧದಲ್ಲಿಯೂ ಪಾರು ಮಾಡುತ್ತಾ ಅವನಿಗೆ ಯಶಸ್ಸನ್ನೇ ಕೋರುತ್ತಿದ್ದನು. ಅವರಿಬ್ಬರೂ ಬಹು ಸಲಿಗೆಯಿಂದ ವರ್ತಿಸುತ್ತಿದ್ದುದರಿಂದಲೂ, ಇಬ್ಬರೂ ಪರಸ್ಪರ ಪ್ರೇಮಿಗಳಾಗಿದ್ದುದರಿಂದಲೂ, ಆಗಾಗ ಅವರು ಸಹಜವಾದ ಒರಟು ಭಾಷೆಯಲ್ಲಿ ಮಾತನಾಡುತ್ತ ಜಗಳವಾಡುತ್ತಿರುವಂತೆ ಕಂಡರೂ ಅದರಲ್ಲಿ ಮತ್ಸರವಿರಲಿಲ್ಲ, ಅಸೂಯೆಯಿರಲಿಲ್ಲ. ಒಬ್ಬರನ್ನೊಬ್ಬರು 'ಕಂಡರೆ ಬದುಕಿದೆವು ; ಕಾಣದಿದ್ದರೆ ಸತ್ತೆವು' ಎಂಬಷ್ಟು ಆತ್ಮೀಯತೆ ಅವರಿಬ್ಬರಲ್ಲಿಯೂ ಇತ್ತು. ನರಹರಪ್ಪನು ಗೌಡನ ವಿಷಯದಲ್ಲಿ ಅಪಾರ ಪ್ರೇಮವನ್ನಿಟ್ಟದ್ದುದಕ್ಕೆ ಮತ್ತೊಂದು ಸೊಗಸಾದ ನಿದರ್ಶನವಿದೆ. ಗೌಡನು ತೋಟವನ್ನು ಮಾಡಿಸಿದ ಮೂರು ವರ್ಷಗಳನಂತರ ದಾರುಣವಾದ ಕ್ಷಾಮವು ತಲೆದೋರಿತು. ಆಗ ಕುಡಿಯುವುದಕ್ಕೆ ನೀರು ಸಿಕ್ಕುವುದೇ ಬಹಳ ಕಷ್ಟವಾಗಿತ್ತು. ತೋಟವು ನೀರಿಲ್ಲದೆ ಒಣಗುತ್ತಿರುವುದನ್ನು ನೋಡಿ, ಗೌಡನು ಸಹಿಸಲಾರದೆ, "ಎಳೆ ಮಕ್ಕಳಂಗಿರೋ ಸಸಿ ನೀರಿಲ್ದೆ ಸಾಯೋದು ಈ ಕಣ್ಣಾರೆ ಹೆಂಗೆ ನೋಡೋದು ನರಹರಪ್ಪ? ಕರಳು ಕಿತ್ತು ಬಂದಂಗಾಗ್ತದೆ" ಎಂದು ದುಃಖಪಡುತ್ತಿದ್ದ. ಅಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ತೋಟವು ಹನಗೆಡುವುದಕ್ಕೆ ಅವಕಾಶವನ್ನೀಯದೆ ಗೌಡನೂ, ಆತನ ಹೆಂಡತಿಯೂ ಕಷ್ಟಪಟ್ಟು ಬಾವಿಯಿಂದ ನೀರನ್ನು ಸೇದಿ ತೋಟದ ಸಸಿಗಳಿಗೆ ನೀರನ್ನು ಎರೆಯುತ್ತಿದ್ದರು. ಊರಿನ ಜನರೂ ಆಗಾಗ ಅವರ ಸಹಾಯಕ್ಕೆ ಹೋಗುತ್ತಿದ್ದರೂ ಈ ಕೊನೆಗಾಣದ ದುಡಿತದಲ್ಲಿ ಆ ಗಂಡ ಹೆಂಡತಿ ಅರ್ಧವಾಗಿಹೋದರು. ಇವರ ದಾರುಣವಾದ ಕಷ್ಟವನ್ನು ನೋಡಿ ಸಹಿಸಲಾರದ ನರಹರಪ್ಪನು ಊರಿನ ಆಂಜನೇಯನ ಹೆಸರಿನಲ್ಲಿ ಬೆಳಸುತ್ತಿದ್ದ ತೋಟಕ್ಕೆ ಅವನ ದಯವೇ ಇಲ್ಲವೆಂದು ಭಾವಿಸಿ, ಹನುಮನ ಮೈಗೆಲ್ಲಾ ಮೆಣಸಿನಕಾಯನ್ನು ರುಬ್ಬಿ ಹಚ್ಚಿದನು. ಗೌಡನ ಕಷ್ಟವನ್ನು ನೋಡಿ ಸಹಿಸಲಾರದೆಯೋ ಅಥವಾ ನರಹರಪ್ಪನು ಹನುಮನ ಮೈಗೆಲ್ಲಾ ಮೆಣಸಿನಕಾಯಿಯನ್ನು ಹಚ್ಚಿದುದರ ಫಲವಾಗಿಯೋ, ಏನೋ ಎಂತೋ, ಅಂತೂ ಒಂದು ವಾರದಲ್ಲಿ ಭಾರಿ ಮಳೆಯಾಯಿತು. ಇದನ್ನು ನೋಡಿ ಸಂತೋಷಪಟ್ಟ ನರಹರಪ್ಪನು 'ಅಂತೂ ನಿನ್ನ ತಪಸ್ಸು ಸಾರ್ಥಕವಾಯಿತು ಶಿವನಂಜು'. ಎಂದು ಹೊಗಳಿ ಅವನ ಕಷ್ಟಕ್ಕೆ ದೇವರು ಮರುಗಿ ಆತನ ಕಷ್ಟವನ್ನು ಹೋಗಲಾಡಿಸಿದನೆಂದು ಹೇಳುತ್ತಾನೆ. ತಾನು ಹನುಮಪ್ಪನಿಗೆ ಕೊಟ್ಟ ಶಿಕ್ಷೆಯ ಪ್ರತಿಫಲ ಎಂದು ಹೇಳಿಕೊಳ್ಳುವ ಅಹಂಕಾರಬುದ್ಧಿ ಹುಟ್ಟಲಿಲ್ಲ ಆತನಿಗೆ.

ಶಿವನಂಜೇಗೌಡನಿಗೆ ಇಬ್ಬರು ಮಕ್ಕಳಿದ್ದರು. ಇವರಿಬ್ಬರ ಜಗಳದಿಂದ ಆಸ್ತಿ ಭಾಗವಾಯಿತು. ಆಗ ನರಹರಪ್ಪನ ಹೆಸರಿನಲ್ಲಿದ್ದ ತೋಟವನ್ನು ರಾಮಯ್ಯ ಬಯಸಿ ಜಗಳ ಹತ್ತುತ್ತದೆ. ತಾನು ಕೊಟ್ಟ ಮಾತು ಹೋಗುವುದಾಗಿ ಗೌಡನು ವ್ಯಥೆಪಡುತ್ತಿರಲು, ನರಹರಪ್ಪ, 'ಅವನಿಗೇ ಕೊಟ್ಟು ಬಿಡು' ಎಂದು ಸಲಹೆ ಯಿತ್ತನು. ತನ್ನ ಹೆಸರಿನಲ್ಲಿದ್ದ ತೋಟವು ಹೋಗುವುದಲ್ಲಾ ಎಂದು ತೃಣ ವಾದರೂ ಚಿಂತೆಪಡಲಿಲ್ಲ. ಒಂದಾಗಿದ್ದ ಗೌಡನ ಮನೆಯು ಇಬ್ಭಾಗವಾದುದಕ್ಕೆ ವ್ಯಾಕುಲಪಡುತ್ತಾನೆ. ತೋಟಕ್ಕೆ ಬದಲಾಗಿ ರಾಮಯ್ಯ ತನ್ನ ತಾಯಿಯ ಒಡವೆಗಳನ್ನೆಲ್ಲಾ ತೋಟದ ಬೆಲೆಯೆಂದು ಕೊಟ್ಟಾಗ, ನರಹರಪ್ಪ ಅವುಗಳನ್ನು ತೆಗೆದುಕೊಂಡು, "ಪುಟ್ಟತಾಯಿ ತನ್ನ ತಂಗಿ ಇದ್ದ ಹಾಗೆ" ಎಂದು ಹೇಳಿ, ಅವನ್ನು ಅವಳ "ಮೈಮೇಲೆ ಇಡು" ಎಂದು ಹೇಳಿ, ಹೊರಟುಹೋದನು. ನರಹರಪ್ಪನಿಗೆ ಗೌಡನ ಸಂಸಾರದ ವಿಷಯದಲ್ಲಿ ಎಷ್ಟು ಅಭಿಮಾನವಿತ್ತು ಎಂಬುದಕ್ಕೆ ಇದು ಉತ್ಕೃಷ್ಟವಾದ ನಿದರ್ಶನ.

ಶಿವನಂಜೇಗೌಡನು ದುಡುಕಿ ಕೆಲಸ ಮಾಡಿದಾಗ ನರಹರಪ್ಪ ಅವನಿಗೆ ಸರಿಯಾಗಿ ಬುದ್ಧಿ ಹೇಳುತ್ತಿದ್ದ, ಆಪ್ತ ಸಚಿವನಂತೆ. ಕರಿಯಪ್ಪ ಸುಬ್ಬಾಭಟ್ಟರ ವಿಷಯದಲ್ಲಿ ಜಾಗರೂಕನಾಗಿರುವಂತೆ ಎಚ್ಚರಿಸುತ್ತಲೇ ಇದ್ದನು.

ಗೌಡನ ಆಪ್ತಸಚಿವನಂತಿದ್ದ ನರಹರಪ್ಪನು ಗೌಡನ ಹೆಂಡತಿ ಸತ್ತಾಗಿ ನಿಂದಲೂ ಆತನನ್ನು ತನ್ನ ಮನೆಗೆ ಕರೆದುಕೊಂಡು ಬಂದು ಅವನಿಗೆ ಬೇಕಾದ ಊಟ ಉಪಚಾರವನ್ನೆಲ್ಲಾ ಮಾಡುತ್ತಿದ್ದನು. ತನ್ನ ಮಕ್ಕಳು ಒಬ್ಬರೊಂದಿಗೊ ಬ್ಬರು ಕಲಹವಾಡಿ ನಾಶವಾದಾಗ ಗೌಡನಿಗೆ ಬುದ್ಧಿಭ್ರಮಣೆಯಾಯಿತು. ಹುಚ್ಚ ನಾದ ಗೌಡನು ದಿಕ್ಕಿಲ್ಲದವನಾದ. ಹಳ್ಳಿಗಾಗಿಯೇ ತನ್ನ ಜೀವವೆಲ್ಲವನ್ನೂ ಧಾರೆ ಯೆರೆದು ತನ್ನ ಸರ್ವಸ್ವವನ್ನೂ ಹಾಳುಮಾಡಿಕೊಂಡ ಶಿವನಂಜೇಗೌಡನಿಗೆ ಆ ಹಳ್ಳಿಯಲ್ಲಿ ಒಂದು ತುತ್ತು ಅನ್ನ ಹಾಕುವವರು ಇರಲಿಲ್ಲ. ಅಂತಹ ದಾರುಣ ಪರಿಸ್ಥಿತಿಯಲ್ಲಿ ನರಹರಪ್ಪನೇ ಗತಿಯಾದ ಗೌಡನಿಗೆ. ಅವನ ಹೆಂಡತಿ ಸತ್ತಾಗಿ ನಿಂದಲೂ ಅವನ ರಕ್ಷಣೆ ನರಹರಪ್ಪನದಾಗಿತ್ತು.

ಶಿವನಂಜೇಗೌಡ, ನರಹರಪ್ಪನಂತಹ ಮಿತ್ರರು ಅತಿ ವಿರಳ. ಇಂತಹ ಮಿತ್ರರು ನಮ್ಮ ದೇಶದಲ್ಲಿ ಅಸಂಖ್ಯಾತ ಮಂದಿಯಿದ್ದರೆ ನಮ್ಮ ದೇಶವು ಪ್ರಗತಿಪರ ರಾಷ್ಟ್ರವಾಗುವುದರಲ್ಲಿ ಸಂಶಯವೇ ಇಲ್ಲ.

—ಬಿ. ಆರ್. ಚಂದ್ರಶೇಖರ
(Pu.C.,L.)

# ಹನುಮಪ್ಪ-ರಾಮಯ್ಯ

**ಹನುಮಪ್ಪ :**

ಶಿವನಂಜೇಗೌಡನಿಗೆ ಇಬ್ಬರು ಮಕ್ಕಳಿದ್ದರು. ದೊಡ್ಡವನು ಹನುಮಪ್ಪ, ಚಿಕ್ಕವನು ರಾಮಯ್ಯ. ಆ ಇಬ್ಬರು ಮಕ್ಕಳು, ತಂದೆಯ ಎರಡು ಕಣ್ಣುಗಳಂತಿದ್ದರು. ಅವರಲ್ಲಿ ಹನುಮಪ್ಪ, ಸರ್ವ ವಿಧಗಳಲ್ಲೂ ಶಿವನಂಜೇಗೌಡನಂತೆಯೇ ಇದ್ದ. ಪುಟ್ಟತಾಯಮ್ಮನಿಗೆ ಕಿರಿಯ ಮಗನನ್ನು ಕಂಡರೆ ಬಹಳ ಅಕ್ಕರೆ. ಅವರು ಯಾವ ತಪ್ಪು ಮಾಡಿದರೂ ಶಿವನಂಜೇಗೌಡ ಅವರನ್ನು ದಂಡಿಸುತ್ತಿದ್ದುದರಿಂದ ಅವರಿಗೆ ಒಳ್ಳೆಯ ಗುಣಗಳು ಬಂದಿದ್ದುವು.

ಹನುಮಪ್ಪನಿಗೆ ಒಳ್ಳೆಯ ಗುಣಗಳು ಬಂದಿದ್ದುದರಿಂದ ಆತ ಹೊಲದಲ್ಲಿ ದುಡಿಯುತ್ತಿದ್ದ. ಅದರ ಜೊತೆಗೆ ತಾಯಿ ತಂದೆಗೆ ಮನನೋವಾಗದಂತೆ ನಡೆದುಕೊಳ್ಳುತ್ತಿದ್ದ. ಈತನಿಗೆ ಅವನ ಮನೋಧರ್ಮವನ್ನು ಅರಿತಂತಹ ಚನ್ನಮ್ಮ ಎಂಬ ಪತ್ನಿಯಿದ್ದಳು. ಈಕೆ ಬಹಳ ಪತಿವ್ರತೆ. ಹನುಮಪ್ಪ ಹೆಂಡತಿಯನ್ನು ಪ್ರೀತಿ ವಿಶ್ವಾಸಗಳಿಂದ ನೋಡಿಕೊಳ್ಳುತ್ತಿದ್ದ. ಆಕೆಯ ಮನಸ್ಸನ್ನು ಅರಿತು, ಆಕೆಯ ಕೆಲಸವನ್ನು ನಡೆಸಿಕೊಡುತ್ತಿದ್ದನು. ಅಂದರೆ, ಪತ್ನಿಯ ಮಾತಿಗೆ ಮರುಳಾಗುವಂತಹ ವ್ಯಕ್ತಿಯಲ್ಲ ಹನುಮಪ್ಪ. ಈತ ಸೋದರನ ಬಗ್ಗೆ ಉದಾಸೀನನಾಗಿರಲಿಲ್ಲ. ಅವನ ನಡತೆಯ ಬಗ್ಗೆ ಬಹಳ ಗಮನ ಕೊಟ್ಟಿದ್ದ. ತಮ್ಮ ರಾಮಯ್ಯನ ಮೇಲೆ ವಿಶ್ವಾಸವಿಟ್ಟಿದ್ದ ಹನುಮಪ್ಪ ತಮ್ಮನನ್ನು ಹೊಲದ ಕೆಲಸಗಳಿಗೆ ಬಿಡುತ್ತಿರಲಿಲ್ಲ. ಹಾಗೆ ವಿಶ್ವಾಸವಿಟ್ಟಿದ್ದರಿಂದಲೇ ಹನುಮಪ್ಪ, ತನ್ನ ತಮ್ಮ ಕೆಟ್ಟ ಚಾಳಿಗೆ ಇಳಿದಿರುವ ವಿಚಾರವನ್ನು ತಿಳಿದು, ಆತನನ್ನು ದಂಡಿಸಿದ. ಆತನ ನೀಚ ಸಹವಾಸಕ್ಕಾಗಿ ಬಹಳ ವ್ಯಥೆಪಟ್ಟ.

ಒಮ್ಮೆ ತಮ್ಮನ ಹೆಂಡತಿಗೂ ತನಗೂ ಆದ ಜಗಳದಲ್ಲಿ, ಆಕೆ ಬಿರುನುಡಿಗಳನ್ನಾಡಿದಳು. ಆಕೆಗೆ ಹನುಮಪ್ಪ ಒಳ್ಳೆಯ ಬುದ್ಧಿ ಹೇಳಲು ಹೋಗಿ ತಮ್ಮನ ಕೋಪಕ್ಕೆ ಪಾತ್ರನಾದ. ಆದರೆ ಹನುಮಪ್ಪ ತಂದೆಯಾದ ಶಿವನಂಜೇಗೌಡನ ಮನಸ್ಸನ್ನು ನೋಯಿಸಲಿಲ್ಲ. ಈತನ ಕುಟುಂಬಪ್ರೇಮ ಅಪಾರವಾದುದು.

ಜಗಳ ನಡೆದನಂತರ ರಾಮಯ್ಯ ಹೆಂಡತಿಯ ಮಾತಿನಂತೆ, ಆಸ್ತಿ
ವಿಭಾಗ ಮಾಡುವಂತೆ ಹಠ ಹಿಡಿದ. ಶಿವನಂಜೇಗೌಡ ಮತ್ತು ಹನುಮಪ್ಪ ಬುದ್ಧಿ
ಹೇಳಿದರು. ಆದರೆ ಆತ ಬಿಡದೆ ಹಠ ಹಿಡಿದುದರಿಂದ ಆಸ್ತಿ ವಿಭಾಗವಾಯಿತು.
ರಾಮಯ್ಯ ತನಗೆ ಬೇಕಾದುದನ್ನು ತೆಗೆದುಕೊಂಡ. ತಾಯಿ ಬದುಕಿರುವಾಗಲೆ
ತಾಯಿಯ ಒಡವೆಯಲ್ಲಿ ಪಾಲು ಕೇಳಿದ. ತಾಯಿ ಬದುಕಿರುವಾಗ ಪಾಲು ಏ
ಎಂದು ಹನುಮಪ್ಪ ಕೇಳಿದ. ಆದರೆ, ರಾಮಯ್ಯ ಪಂಚಾಯಿತಿದಾರ
ಮುಖಾಂತರ ತಾಯಿಯ ಒಡವೆಗಳನ್ನು ಎರಡು ಪಾಲು ಮಾಡಿಸಿ, ತಾನು ಒಂದ
ಪಾಲು ತೆಗೆದುಕೊಂಡ. ಆದರೆ ಹನುಮಪ್ಪ ಒಂದು ಒಡವೆಯನ್ನೂ ಮುಟ್ಟಲಿಲ್ಲ
ಈ ರೀತಿ ಹನುಮಪ್ಪ ಅಮೂಲ್ಯವಾದ ಮಾತೃಭಕ್ತಿ ತೋರಿಸಿದ.

ಹನುಮಪ್ಪ ಒಳ್ಳೆಯ ಕಾರ್ಯನಿರತ. ಪಾಲಿಗೆ ಬಂದದ್ದು ಪರಮಾನ
ವೆಂದಿದ್ದ. ಸ್ವಶಕ್ತಿಯಿಂದ ಒಳ್ಳೆಯ ಫಸಲನ್ನು ಬೆಳೆದು, ಬೇರೆಯವರು ಅಸೂಯೆ
ಪಡುವಂತೆ ಮಾಡಿದ. ಆದರೆ ದಾನ, ಧರ್ಮ ಬಿಡಲಿಲ್ಲ. ತನ್ನ ಕೆಲಸವೆಷ್ಟೋ
ಅಷ್ಟು ನೋಡಿಕೊಂಡು ಎಲ್ಲರಿಗೂ ಪ್ರೀತಿಪಾತ್ರನಾಗಿದ್ದ.

ಹೀಗಿರಲು ರಾಮಯ್ಯ ಜಗಳಕ್ಕೆ ಕಾಲುಕೆರೆದು ಹನುಮಪ್ಪನೊಂದಿ
ಕಲಹ ತೆಗೆದ. ತನ್ನ ಪೈರಿನ ರಕ್ಷಣೆಗಾಗಿ ಜನರನ್ನು ಕಟ್ಟಿಕೊಂಡು ರಾಮಯ
ನೊಡನೆ ಜಗಳವಾಡಬೇಕಾಯಿತು. ಈ ಕಾರಣದಿಂದ ಹನುಮಪ್ಪ ಜೈಲುವಾ
ಅನುಭವಿಸಬೇಕಾಯಿತು. ಯಾರದೋ ತಪ್ಪಿಗೆ ಯಾರಿಗೋ ಶಿಕ್ಷೆಯಾಯಿತು
ಜೈಲಿನಿಂದ ಬಂದ ಮೇಲೆ ಹನುಮಪ್ಪ ಸೇಡು ತೀರಿಸಲು ಕಾಯುತ್ತಿದ್ದ. ಸಮಯ
ಒದಗಿ ಬಂತು. ರಾಮಯ್ಯನ ಹೆಂಡತಿ ಲಕ್ಷ್ಮಿಯ ಕೈಯಿಂದ ತನ್ನ ಮಗ
ಕೊಲೆಯಾದುದು ತಿಳಿದುಬಂತು. ದುಃಖದ ಭರದಲ್ಲಿ ಸೇಡಿನ ಆಲೋಚ
ಹುಟ್ಟಿ, ಅವಳನ್ನು ಹನುಮಪ್ಪ ಕೊಲ್ಲಲು ಪ್ರಯತ್ನಿಸಿ, ತಮ್ಮನನ್ನು ಕೊಂದ
ರಾಮಯ್ಯ ಸತ್ತ. ಹನುಮಪ್ಪನ ಹಾಲಿನಂತಹ ಸಂಸಾರ ಹಾಳಾಯಿತು.
ಸ್ವಭಾವತಃ ನಿರಪರಾಧಿಯಾದ ಹನುಮಪ್ಪ ಕೊಲೆಪಾತಕನಾಗಿ ನಾಶವಾದ.

**ರಾಮಯ್ಯ :**

ಈತ ಶಿವನಂಜೇಗೌಡನ ಎರಡನೆಯ ಮಗ. ಚಿಕ್ಕಂದಿನಿಂದಲೂ ತಾಯಿ
ತಂದೆ, ಅಣ್ಣ ಮತ್ತು ಅತ್ತಿಗೆ ಇವರ ಪ್ರೀತಿಗೆ ಪಾತ್ರನಾಗಿದ್ದ. ಕರಿಯಪ್ಪ
ಸುಬ್ಬಾಭಟ್ಟರ ಸ್ನೇಹ ಸಹವಾಸಗಳಿಂದ ಈತನ ಶೀಲ ಕೆಟ್ಟಿತು; ಇಸ್ಪೇಟ
ಮುಂತಾದ ಕೆಟ್ಟ ಚಾಳಿಗಳಿಗೆ ಬಿದ್ದ. ಇದು ಅತ್ತಿಗೆಗೆ ತಿಳಿದು, ಶಿವನಂಜ

ಗೌಡನಿಂದ ಶಿಕ್ಷಿಸಲ್ಪಟ್ಟ. ಇಷ್ಟಾದರೂ ರಾಮಯ್ಯ ಒಳ್ಳೆಯ ದಾರಿಗೆ ಬರಲಿಲ್ಲ. ಆದರೆ ಸುಬ್ಬಾಭಟ್ಟ ಮತ್ತು ಕರಿಯಪ್ಪನ ದುರ್ಬೋಧನೆಗಳಿಗೆ ಕಿವಿಗೊಟ್ಟ. ಮನೆ ಬಿಟ್ಟು ಹೊರಟವನು ಮತ್ತೆ ಮನೆಸೇರಿ, ಲಕ್ಷ್ಮಿಯನ್ನು ಮದುವೆಯಾದ. ಆಕೆ ರಾಮಯ್ಯನ ನೆಚ್ಚಿನ ಮಡದಿಯಾದಳು. ಒಮ್ಮೆ ತಾಯಿಗೆ ಎದುರುವಾದಿಸಿದ. ಹೆಂಡತಿಯನ್ನು ಹೊಡೆದ. ಮತ್ತೆ ಹೆಂಡತಿಯ ಮಾತಿಗೆ ಬೆಲೆಗೊಟ್ಟು ಹನುಮಪ್ಪನ ಮೇಲೆ ದ್ವೇಷ ಸಾಧಿಸಲಾರಂಭಿಸಿದ. ಜಲಜಾಕ್ಷಮ್ಮ, ಕರಿಯಪ್ಪ ಮತ್ತು ಸುಬ್ಬಾಭಟ್ಟರ ಮಾತಿಗೆ ಬೆಲೆಗೊಟ್ಟು ಮನೆ ಮುರಿಯುವ ಕೆಲಸ ಮಾಡಿದ. ಕರಿಯಪ್ಪನ ಮಾತು ಕೇಳಿ, ಹೆತ್ತತಾಯಿಯ ಮೇಲಿದ್ದ ಒಡವೆಯನ್ನು ಭಾಗ ಮಾಡುವಂತೆ ಹಠ ಹಿಡಿದ. ಭಾಗವಾಗಿ ಬೇರೆಯಾದ ಮೇಲೆ ಹಣವನ್ನು ಕೆಟ್ಟ ಚಾಳಿಗೆ ನೀರಿನಂತೆ ಸುರಿದ. ಅನರಿವರ ಮಾತು ಕೇಳಿ, ಶಿವನಂಜೇಗೌಡ ಹನುಮಪ್ಪನಿಗೆ ಸಹಾಯ ಮಾಡುತ್ತಿರುವನೆಂದು ತಪ್ಪು ತಿಳಿದುಕೊಂಡು, ಹನುಮಪ್ಪನ ಹೊಲಕ್ಕೆ ದನ ನುಗ್ಗಿಸಿ, ಜಗಳಕ್ಕೆ ಕಾರಣನಾದ. ಕರಿಯಪ್ಪ ಮತ್ತು ಸುಬ್ಬಾಭಟ್ಟರ ಕೈಬೊಂಬೆಯಾದ. ಪೋಲೀಸರಿಗೆ ಲಂಚ ಕೊಟ್ಟು, ಅಣ್ಣನನ್ನು ಜೈಲಿಗೆ ಕಳುಹಿಸಿದ. ಕೊನೆಗೆ ಹನುಮಪ್ಪನ ಕೋಪಕ್ಕೆ ಬಲಿಯಾಗುವುದರಲ್ಲಿದ್ದ ಹೆಂಡತಿಯನ್ನು ರಕ್ಷಿಸಿಕೊಳ್ಳಹೋಗಿ ಹನುಮಪ್ಪನಿಂದ ತಾನೇ ಕೊಲೆಯಾದ. ಈತ ಸ್ವತಂತ್ರ ಬುದ್ಧಿ ಇಲ್ಲದೆ, ವಾತಾವರಣ ಪರಿಸ್ಥಿತಿಯಿಂದ, ಸಹವಾಸ ದೋಷ ಗಳಿಗೆ ಒಳಪಟ್ಟು ನಾಶವಾದ. ಮತ್ತು ಚಂದವಳ್ಳಿಯ ನಾಶಕ್ಕೂ ಕಾರಣನಾದ. ಇವನಿಂದ ಚಂದವಳ್ಳಿಯ ಘನತೆ ಹಾಳಾಯಿತು. ಶಿವನಂಜೇಗೌಡನ ಕಾಲದಲ್ಲಿ ಬಹಳ ವೈಭವದಿಂದ ಇದ್ದ ಚಂದವಳ್ಳಿ ಆತನ ಕಣ್ಣಮುಂದೆಯೇ ಆತನ ಕಿರಿಯ ಮಗನಿಂದ ಹಾಳಾಯಿತು.

—ಎಂ. ಡಿ. ಮೋಹನ್
(Pu.C.,L.)

——

# ಸುಬ್ಬಾಭಟ್ಟ - ಜಲಜಾಕ್ಷಮ್ಮ

## (ದುಷ್ಟದಾಂಪತ್ಯ)

**ಸುಬ್ಬಾಭಟ್ಟ** ಸಾವಗಡದಲ್ಲಿ ವಾಸಿಸುತ್ತಿದ್ದ. ಕರ್ಮಠ ಬ್ರಾಹ್ಮಣ. ಇವನು ಮದುವೆ–ಮುಂಜಿ ಮಾಡಿಸುವುದು ಮುಂತಾದುವನ್ನು ಚೆನ್ನಾಗಿ ತಿಳಿದವನಾಗಿದ್ದ. ವೆಂಕಟರಮಣಜೋಯಿಸರ ಸಲಹೆಯಂತೆ, ಚಂದವಳ್ಳಿಯಲ್ಲಿ ಜೋಯಿಸರಿಲ್ಲವೆಂದು ಶಿವನಂಜೇಗೌಡನು ಪ್ರಾರ್ಥಿಸಿಕೊಂಡಾಗ, ಇವನು ಚಂದವಳ್ಳಿಗೆ ಬಂದು ನೆಲಸಿದನು. ಇವನಿಗೆ ವಾಸಕ್ಕೆ ವಸತಿ ಎಲ್ಲವನ್ನೂ ಗೌಡನು ಅನುಮಾಡಿಕೊಟ್ಟಿದ್ದ. ಇಷ್ಟೆಲ್ಲಾ ಕಲ್ಪಿಸಿಕೊಟ್ಟರೂ ಅವನು ಆಶೆಪುರುಕ. ಎಷ್ಟು ಹಣಕೊಟ್ಟರೂ ಇವನ ಮನಸ್ಸಿಗೆ ತೃಪ್ತಿಯಾಗುತ್ತಿರಲಿಲ್ಲ ; ಗೊಣಗುಟ್ಟುತ್ತಲೇ ಇದ್ದ. ಇವನು ಯಾರಲ್ಲಿಯೂ ನಂಬಿಕೆ, ವಿಶ್ವಾಸ ಇಡುತ್ತಿರಲಿಲ್ಲ. ಶಿವನಂಜೇಗೌಡ ಎಷ್ಟು ಹೇಳಿದರೂ ಕೇಳದೆ, ಅವನ ಜಮೀನನ್ನು ತನ್ನ ಹೆಸರಿಗೆ ಮಾಡಿಸಿಕೊಂಡ. ಆಚಾರನಿಷ್ಠೆಯಿಂದಿರಬೇಕಾದ ವೃತ್ತಿಯನ್ನು ಅವಲಂಬಿಸಿದ್ದರೂ, ಅವನು ಮಾಡುತ್ತಿದ್ದುದ್ದು ಅನಾಚಾರವೇ. ನಾಗರಹಾವಿಗೆ ಎಷ್ಟು ಹಾಲನ್ನು ಹಾಕಿದರೂ ಅದರ ವಿಷ ಮಾತ್ರ ಇಂಗುವುದಿಲ್ಲ. ಹಾಗೆಯೇ, ಶಿವನಂಜೇಗೌಡ ಎಷ್ಟು ಉಪಕಾರ ಮಾಡಿದರೂ ಸುಬ್ಬಾಭಟ್ಟನು ಮಾತ್ರ ಕೆಟ್ಟತನವನ್ನು ಬಿಡುತ್ತಿರಲಿಲ್ಲ. ಒಂದು ದಿನ ಗೌಡ ಅಂದ ಯಾವುದೋ ಮಾತಿಗೆ ಅದನ್ನು ಮನಸ್ಸಿನಲ್ಲಿ ಇಟ್ಟುಕೊಂಡು, ಅದಕ್ಕಾಗಿ ದ್ವೇಷ ಸಾಧಿಸತೊಡಗಿದ; ತಾನು ಉಂಡುತಿಂದ ಮನೆಯನ್ನೇ ವಂಚಿಸತೊಡಗಿದ.

ಚಂದವಳ್ಳಿಯಲ್ಲಿ ನೀಚನಾಗಿಯೂ, ದುರಾಚಾರಿಯಾಗಿಯೂ ಪ್ರಬಲಿಸಿದ್ದ ಕರಿಯಪ್ಪನ ಸ್ನೇಹವನ್ನು ಸ್ವಾರ್ಥಸಾಧನೆಗೋಸ್ಕರ ಬೆಳಸಲು ಇಚ್ಛಿಸಿದ ಸುಬ್ಬಾಭಟ್ಟ. ತನ್ನೊಡನೆ ಸೇರಿ ತನಗೆ ಅನ್ನವಿತ್ತು ಸಾಕಿದ ಶಿವನಂಜೇಗೌಡನ ಮನೆಯನ್ನು ಹಾಳುಮಾಡಲು ಅನೇಕ ವಿಧದಲ್ಲಿ ಕಾರ್ಯಾರಂಭ ಮಾಡಿದ. ಗೌಡನಿಗೆ ಸುಬ್ಬಾಭಟ್ಟ ಕೊಟ್ಟ ಕಷ್ಟಗಳು ಒಂದಲ್ಲ, ಎರಡಲ್ಲ ; ಹಲವಾರು. ಕುಟ್ಟೆಹುಳು ಗಟ್ಟಿಯಾದ ಮರವನ್ನು ಸೇರಿ ಒಳಗೆ ಕೊರೆದು ನಾಶಮಾಡುವಂತೆ, ಸುಬ್ಬಾಭಟ್ಟ

ಕೋಟೆಯಂತೆ ಭದ್ರವಾಗಿದ್ದ ಮನೆ ಹೊಕ್ಕು, ಗೌಡನ ಮನೆತನವನ್ನು ಒಡೆದು. ಅವನ ಜೀವನದ ದುರಂತ ನಾಟಕದ ಸೂತ್ರಧಾರ, ಸುಬ್ಬಾಭಟ್ಟ.

ಏನೂ ತಿಳಿಯದ ಶಿವನಂಜೇಗೌಡನ ಮಗ ರಾಮಯ್ಯನನ್ನು ತನ್ನ ಮಾತಿನಿಂದ ಮರಳುಗೊಳಿಸಿ, ಅವನು ತನ್ನ ಮನೆಯವರ ಮೇಲೇ ದ್ವೇಷ ಸಾಧಿಸುವಂತೆ ಮಾಡಿದ. ಅಣ್ಣ-ತಮ್ಮ ತಂದೆ-ಮಕ್ಕಳಲ್ಲಿ ಪರಸ್ಪರ ಜಗಳ ತಂದುಹಾಕಿ, ಆಸ್ತಿಯನ್ನು ವಿಭಾಗಿಸಿದ. ಹಾಲಿನಂತಹ ಸಂಸಾರಕ್ಕೆ ಹುಳಿಹಾಕಿ, ಒಂದಾಗಿದ್ದ ಮನೆಯನ್ನು ಒಡೆದುಹಾಕಿಸಿದ. ಇವನು ರಾಮ್ಯನನ್ನು ಮನೆ ಬಿಡಿಸಿ ಬೇರೆ ಮನೆಯಲ್ಲಿ ವಾಸಮಾಡುವಂತೆ ಮಾಡಿಸಿದ. ರಂಗವಲ್ಲಿ ಕೆಳಗೆ ನುಸಿಯುವ ತಂತ್ರಗಾರ, ಬೆರಳು ತೋರಿಸಿದರೆ ಹಸ್ತ ನುಂಗುವ ಕಳಿಂಗ. ಅನ್ಯಾಯಮಾಡಲೂ ಮಿತಿಯುಂಟು. ಬಿತ್ತಿದುದನ್ನು ಬೆಳೆಯಬೇಕಾದುದು ಲೋಕಧರ್ಮ. ಇಮ್ಮಾವಿನ ಮರವನ್ನು ನೆಟ್ಟವನು ಅದರ ಮಧುರ ಫಲವನ್ನು ಅನುಭವಿಸುವನು ; ಹಾಗೆಯೇ ಬೇವಿನ ಮರವನ್ನು ನೆಟ್ಟವನು ಅದರ ಕಹಿಯನ್ನು ಅನುಭವಿಸಬೇಕಲ್ಲವೆ ? ಹಾಗೆಯೇ, ಸುಬ್ಬಾಭಟ್ಟ ಮಾಡಿದ ಪಾಪಕೃತ್ಯಗಳಿಗೆ ತಕ್ಕ ಪ್ರಾಯಶ್ಚಿತ್ತವನ್ನು ಅನುಭವಿಸುವನು. ಅವನ ಸ್ನೇಹವಿದ್ದು ಅವನಿಂದ ಅನ್ಯಾಯದ ಪಾಠ ಕಲಿತ ಕರಿಯಪ್ಪ ಕಡೆಗೆ ಗುರುವಿಗೆ ತಿರುಮಂತ್ರ ಹೇಳಿಕೊಟ್ಟ. ಸಬ್ಬಾಭಟ್ಟರ ಹೆಂಡತಿಯಾದ ಜಲಜಾಕ್ಷಮ್ಮನವರನ್ನು ತನ್ನ ಸ್ವಾಧೀನ ಮಾಡಿಕೊಂಡ ಕರಿಯಪ್ಪ. ಕೊನೆಗೆ ಸುಬ್ಬಾಭಟ್ಟ ಕೈಹಿಡಿದ ಹೆಂಡತಿಯ ಕೈಬಿಟ್ಟು, ಆ ಊರನ್ನೂ ಬಿಟ್ಟು ಓಡಿಹೋದ ; ಹೋದ ಆರುತಿಂಗಳಾದ ಮೇಲೆ, ಕೊರಗಿ ಕೊರಗಿ ಒರಗಿದ.

ಕಾಡುಕಿಚ್ಚು ತಾನು ಹುಟ್ಟಿದ ಕಾಡನ್ನು ಸುಟ್ಟು ಧ್ವಂಸಮಾಡುವಂತೆ, ತನಗೆ ಅನ್ನ ನೀರು ಹಾಕಿ ಕಾಪಾಡಿದ ದಣಿಯ ಮನೆಯನ್ನು ಹಾಳುಮಾಡಿದ, ಬಂಗಾರದಂತಿದ್ದ ಹಳ್ಳಿಯನ್ನು ಮಸಣವನ್ನಾಗಿ ಮಾಡಿದ ಪರಮ ಪಾತಕಿ ಸುಬ್ಬಾಭಟ್ಟ. ಆ ದಿನ ಸತ್ತ ಶಕುನಿ ಸುಬ್ಬಾಭಟ್ಟನಾಗಿ ಮತ್ತೆ ಅವತರಿಸಿರಬೇಕು ಎನ್ನುವಂತಿದೆ.

**ಜಲಜಾಕ್ಷಮ್ಮ** ಸುಬ್ಬಾಭಟ್ಟರ ಹೆಂಡತಿ ; ಗಂಡನಿಗೆ ತಕ್ಕ ಹೆಂಡತಿ. ತಾನು ಎಲ್ಲಿ ಕಾಲಿಡುವಳೋ ಆ ಜಾಗದಲ್ಲಿ ಬೆಂಕಿ ಎಬ್ಬಿಸಬಲ್ಲ ಕಟ್ಟಹೆಂಗಸು ಆಕೆ. ಕಿತ್ತು ತಿನ್ನುವ ಬಡತನ ಇದ್ದರೂ, ಆಕೆಗೆ ತಗ್ಗಿನಡೆಯುವ ಗುಣವಿರಲಿಲ್ಲ. ತೃಪ್ತಿ ಎನ್ನುವ ಮಾತೇ ಅವಳ ಬಾಯಿಂದ ಬರುತ್ತಿರಲಿಲ್ಲ. ಚಂದವಳ್ಳಿಗೆ ಬಂದಮೇಲೆ, ಮನೆಯಲ್ಲಿ ಬೇಕಾದ ಅನುಕೂಲತೆಗಳಿದ್ದರೂ ಆಕೆ ತಿರುಪೆಗೆ

ಹೋಗುತ್ತಿದ್ದುದು ತಪ್ಪುತ್ತಿರಲಿಲ್ಲ. ತನ್ನ ಮನೆಯಲ್ಲಿ ಹಸು ಇಟ್ಟುಕೊಂಡಿದ್ದರೂ, ಹಾಲುಕರೆದು ಇಲ್ಲವೆಂದು ಹೇಳಿ, ಗೌಡರ ಮನೆಯ ಹಾಲನ್ನು ತೆಗೆದುಕೊಂಡು ಬರುವುದು ಅವಳ ವಾಡಿಕೆಯಾಗಿತ್ತು.

ನಾಲಗೆ ತುದಿಯಲ್ಲಿ ಸಿಹಿ ಜೇನನ್ನು ಸುರಿಸಿ ಜನರನ್ನು ಮರುಳುಗೊಳಿಸ ಬಲ್ಲ ಮಾಟಗಾತಿ ಇವಳು. ಸ್ತ್ರೀಸಹಜವಾದ ಲಜ್ಜೆ ಗಾಂಭೀರ್ಯ, ಮಾನ ಮರ್ಯಾದೆಗಳನ್ನೇ ಕಂಡರಿಯದವಳಾಗಿದ್ದಳು. ಬೇರೆಯವರನ್ನು ಹೊಗಳಿ ಅವರಿಂದ ಕಾರ್ಯ ಸಾಧಿಸಿಕೊಳ್ಳುವುದರಲ್ಲಿ ನಿಪುಣೆ.

"ನಾರಿ ಮುನಿದರೆ ಮಾರಿ" ಎಂಬ ಗಾದೆಗೆ ತಕ್ಕಂತೆ ಜಲಜಾಕ್ಷಮ್ಮ ಹಾಲಿನ ಪ್ರಕರಣದಲ್ಲಿ ಪಾರ್ವತಮ್ಮ ಪುಟ್ಟತಾಯಮ್ಮನವರ ಮೇಲೆ ಮುನಿದು, ಅವರ ಮೇಲೆ ಸೇಡು ತೀರಿಸಿಕೊಳ್ಳಲು ಪ್ರಯತ್ನಿಸಿದಳು. ಚಾಡಿ ಹೇಳುವುದರಲ್ಲಿ ಚತುರೆ. ಪಾರ್ವತಮ್ಮ ಪುಟ್ಟತಾಯಮ್ಮ ಇವರು ಅಕ್ಕತಂಗಿಯರಂತಿದ್ದರು ; ಚಾಡಿ ಮಾತಿನಿಂದ ಅವರಲ್ಲಿ ಜಗಳ ತಂದು ಹಾಕಲು ಯತ್ನಿಸಿದಳು. ಗೌಡನಿಗೆ ಈ ಮಾತು ತಿಳಿದುದರಿಂದ, ಅವಳ ಕಲಸ ಕೆಟ್ಟಿತು. ಗೌಡನ ಮನೆಯ ಅನ್ನ ಉಂಡು ಆ ಮನೆಗೇ ಬೆಂಕಿ ಇಡುವಂತಾದಳು.

ಕರಿಯಪ್ಪ ರಾಮಯ್ಯನನ್ನು ತನ್ನ ಆಯುಧ ಮಾಡಿಕೊಂಡಂತೆ ಜಲಜಾಕ್ಷಮ್ಮ ಲಕ್ಷ್ಮಿಯನ್ನು ತನ್ನ ಕೈಯ ಆಯುಧ ಮಾಡಿಕೊಂಡಳು. ಮನೆ ಗೆಲಸವೆಂದರೆ ಕೋಪಗೊಳ್ಳುತ್ತಿದ್ದ ಲಕ್ಷ್ಮಿಯನ್ನು ತನ್ನ ಮನೆಗೆ ಕರಸಿಕೊಂಡು, ಅವಳನ್ನು ಹೊಗಳಿ ಅವಳ ಮನಸ್ಸನ್ನು ಕೆಡಿಸಿ, ಅತ್ತೆ ಓರಗಿತ್ತಿಯರ ಮೇಲೆ ಅವಳನ್ನು ಎತ್ತಿ ಕಟ್ಟಿದಳು. ಇವಳೂ ಕೂಡ ತನ್ನ ಗಂಡನಂತೆ ಒಂದಾಗಿದ್ದ ಮನೆಯನ್ನು ಒಡೆಯಲು ಪ್ರಾರಂಭಿಸಿದಳು. ರಾಮಯ್ಯನನ್ನು ಬೇರೆ ಮನೆ ಮಾಡಬೇಕು ಎಂದು ಹೇಳಿ ರಾಮಯ್ಯನ ಸಾವಿಗೆ ಇವಳು ಕಾರಣಳಾದಳು. ಅವಳೇ ಬೆಳಸಿದ ಪಾಪವೃಕ್ಷ ಕಡೆಗೆ ಅವಳಿಗೆ ಕಹಿ ಫಲವನ್ನು ಕೊಟ್ಟಿತು. ಪಾಪಕೃತ್ಯವನ್ನು ಅನುಸರಿಸಿ ಲಕ್ಷ್ಮಿಯಿಂದಲೇ ಅವಳಿಗೆ 'ಪೊರಕೆ ಪೂಜೆ' ಆಯಿತು.

ಒಟ್ಟಿನಲ್ಲಿ, ತಾನೂ ಹಾಳಾಗಿ, ಸಾಕಿ ಸಲಹಿದ ಗೌಡನ ಮನೆಯನ್ನೂ ಹಳ್ಳಿಯನ್ನೂ ಹಾಳುಮಾಡಿದ ಮನೆಹಾಳಿ, ಊರಮಾರಿ ಜಲಜಾಕ್ಷಮ್ಮ. ಮನೆಮುರುಕ ಸುಬ್ಬಾಭಟ್ಟನಿಗೆ ತಕ್ಕ ಹೆಂಡತಿ.

—ಬಿ. ಆರ್. ಪ್ರಭಾಕರನಾಯ್ಡು
(Pu.C.,C.)

# ‘ಚಂದವಳ್ಳಿಯ ತೋಟ’ದಲ್ಲಿನ ಸ್ತ್ರೀ ಪಾತ್ರಗಳು

ಹಳ್ಳಿಗಳಲ್ಲಿ ವಾಸಮಾಡತಕ್ಕ ಸ್ತ್ರೀಯರಲ್ಲಿ ಸುಬುದ್ಧಿಯುಳ್ಳವರು, ಮಾನ ಧನಾಭಿಮಾನಿಗಳು, ಸ್ನೇಹಪರರು, ಕುಹಕಿಗಳು, ದುರಾಶಾ ಪೀಡಿತರು, ವಿವೇಚನಾ ಶಕ್ತಿಯಿಲ್ಲದವರು ಯಾವ ರೀತಿ ಇರುತ್ತಾರೆಂದು ‘ಚಂದವಳ್ಳಿಯ ತೋಟ’ದಲ್ಲಿ ಸ್ಪಷ್ಟವಾಗಿ ಚಿತ್ರಿತವಾಗಿದೆ.

‘ಚಂದವಳ್ಳಿಯ ತೋಟ’ದ ಸ್ತ್ರೀ ಪಾತ್ರಗಳನ್ನು ಎರಡು ಗುಂಪುಗಳಾಗಿ ವಿಂಗಡಿಸಬಹುದು : ಪಾರ್ವತಮ್ಮ, ಪುಟ್ಟತಾಯಮ್ಮ ಮತ್ತು ಚನ್ನವ್ವ ಇವರುಗಳ ಗುಂಪು ಒಂದು; ಜಲಜಾಕ್ಷಮ್ಮ, ಲಕ್ಷ್ಮಿ ಮತ್ತು ತಿಪ್ಪಿ ಇವರುಗಳ ಗುಂಪು ಇನ್ನೊಂದು.

ಶಿವನಂಜೇಗೌಡ ಮತ್ತು ನರಹರಪ್ಪ ಇವರ ಸ್ನೇಹದಂತೆ ಪಾರ್ವತಮ್ಮ ಮತ್ತು ಪುಟ್ಟತಾಯಮ್ಮ ಇವರ ಸ್ನೇಹವೂ ಹೃದಯಪೂರ್ವಕವಾಗಿ ನೆಲೆಗೊಂಡಿತ್ತು. ಹನುಮಯ್ಯ ಮತ್ತು ರಾಮಯ್ಯ ಇವರ ಗುಣಗಳಿಗೆ ಅನುಸಾರವಾಗಿಯೇ ಹೆಂಡಿರೂ ಅವರಿಗೆ ಲಭಿಸಿದ್ದರು. ಜಲಜಾಕ್ಷಮ್ಮನಂತೂ ಸುಬ್ಬಾಭಟ್ಟನಿಗೆ ತಕ್ಕ ಹೆಂಡತಿಯಾಗಿದ್ದಳು.

ಪಾರ್ವತಮ್ಮ ನರಹರಪ್ಪನಿಗೆ ತಕ್ಕ ಹೆಂಡತಿ. ಗಂಡನಂತೆಯೇ ಉದಾರ ಬುದ್ಧಿಯುಳ್ಳವಳು, ನ್ಯಾಯಕ್ಕೆ ಬೆಲೆಕೊಡುತ್ತಿದ್ದ ಸ್ತ್ರೀ ಈಕೆ. ತನ್ನ ಕೈಯಲ್ಲಿ ಸಾಧ್ಯವಾದಮಟ್ಟಿಗೂ ಇತರರಿಗೆ ಸಹಾಯ ಮಾಡುತ್ತಿದ್ದಳು. ದುರಾಸೆ ಈಕೆಯ ಬಳಿಯಲ್ಲಿಯೂ ಸುಳಿಯುತ್ತಿರಲಿಲ್ಲ.

ಪುಟ್ಟತಾಯಮ್ಮ ಶಿವನಂಜೇಗೌಡರ ಉದಾರ ಬುದ್ಧಿಗೆ ಹೊಂದಿಕೊಂಡಿದ್ದ ಉದಾರ ಗುಣವುಳ್ಳ ಸ್ತ್ರೀ. ಈಕೆಯ ಮೈ ಸ್ಥೂಲವಾದರೂ, ಕಪ್ಪುಬಣ್ಣವಾದರೂ, ಒಂದು ಸಾರಿ ನೋಡುವವರಿಗೆ ಇನ್ನೊಂದು ಸಾರಿ ನೋಡೋಣವೆನ್ನಿಸುತ್ತಿತ್ತು. ಆಭರಣ ಭೂಷಿತಳಾದ ಪುಟ್ಟತಾಯಮ್ಮ ಸಾಕ್ಷಾತ್ ಗೌರೀದೇವಿಯಂತೆ ಕಾಣುತ್ತಿದ್ದಳು; ಊರಿಗೂ ಭೂಷಣವಾಗಿದ್ದಳು. ಈಕೆಯ ಸಂಸಾರವು ಗುಣಾಢ್ಯನಾದ ಗಂಡನಿಂದಲೂ, ಎರಡು ಕಣ್ಣುಗಳಂತಿದ್ದ ಇಬ್ಬರು

ಗಂಡುಮಕ್ಕಳಿಂದಲೂ, ಆಳುಕಾಳುಗಳಿಂದಲೂ, ಹತ್ತಿಪ್ಪತ್ತು ದನಕರುಗಳಿಂದಲೂ ತುಂಬಿ ನಂದಗೋಕುಲದಂತೆಯೂ, ಕ್ಷೀರಸಾಗರದಂತೆಯೂ ಕಂಗೊಳಿಸುತ್ತಿತ್ತು.

ಐಶ್ವರ್ಯಕ್ಕೆ ಯಾವ ರೀತಿ ತವರಾಗಿದ್ದಳೋ ಅದೇ ರೀತಿ ಗುಣಗಳ ಗಣಿಯಾಗಿದ್ದಳು ಪುಟ್ಟತಾಯಮ್ಮ. ಗುಣೈಶ್ವರ್ಯಗಳೆರಡೂ ಈಕೆಯಲ್ಲಿ ಏಕೀಭವಿಸಿದ್ದವು. ಗಂಡನ ಮಾತನ್ನು ಚಾಚೂ ತಪ್ಪದೆ ಪಾಲಿಸುತ್ತಿದ್ದಳು. ಸತ್ಕಾರ್ಯಗಳಲ್ಲಿ ಮನಃಪೂರ್ವಕವಾಗಿ ಭಾಗಿಯಾಗುತ್ತಿದ್ದಳು. ತನ್ನ ಸತ್ಕಾರ್ಯದಲ್ಲಿ ಅಪಜಯವಾಗುವ ಸಂದರ್ಭದಲ್ಲಿ ಗಾಂಧಿಯವರ ಸತ್ಯಾಗ್ರಹದಂತೆ, ಊಟ ಬಿಟ್ಟು ಕುಳಿತು, ಸತ್ಕಾರ್ಯಗಳನ್ನು ನೆರವೇರಿಸುತ್ತಿದ್ದಳು. ಈಕೆ ವಿದ್ಯಾವಂತಳಲ್ಲದಿದ್ದರೂ, ಸ್ವಭಾವತಃ ಜ್ಞಾನಿ; ವಿದ್ಯೆಯೊಂದನ್ನು ಬಿಟ್ಟರೆ, ಈಕೆ ನಾಗರಿಕ ಸ್ತ್ರೀಯರಿಗೆ ಯಾವ ವಿಧದಲ್ಲಿಯೂ ಕಡಮೆ ಇರಲಿಲ್ಲ. ಒಟ್ಟನಲ್ಲಿ ಶಿವನಂಜೇಗೌಡರ ಸಂಸಾರಕ್ಕೆ ತಿಲಕಪ್ರಾಯಳಾಗಿದ್ದಳು, ಪತಿವ್ರತಾಶಿರೋಮಣಿಯಾದ ಮಾನಧನಳಾದ ಪುಟ್ಟತಾಯಮ್ಮ.

ಪುಟ್ಟತಾಯಮ್ಮ ಮತ್ತು ಪಾರ್ವತಮ್ಮ ಇವರ ಸ್ನೇಹಚಿತ್ರವು ಹಳ್ಳಿಯಲ್ಲಿ ಸಾಧ್ವೀ ಸ್ತ್ರೀಯರು ಯಾವ ರೀತಿ ಪರಸ್ಪರ ಹೊಂದಾಣಿಕೆಯಿಂದ ವರ್ತಿಸುತ್ತಾರೆ ಎಂಬುದನ್ನು ಸೂಚಿಸುತ್ತದೆ. ಸಮುದ್ರದ ಆಳವನ್ನು ಕಂಡುಹಿಡಿಯಲು ಅಸಾಧ್ಯ; ಅದೇ ರೀತಿ ಇವರ ಸ್ನೇಹವನ್ನು ಕಂಡುಹಿಡಿಯಲೂ ಸಾಧ್ಯವಾಗುತ್ತಿರಲಿಲ್ಲ. 'ನೂರು ಜುಟ್ಟು ಕಲೆತರೂ ಮೂರು ಜಡೆ ಕಲೆಯುವುದಿಲ್ಲ'ವೆಂಬ ಗಾದೆಯನ್ನು ಸುಳ್ಳು ಮಾಡಿತ್ತು ಇವರ ಸ್ನೇಹ.

ದುಷ್ಟ ಜಲಜಾಕ್ಷಮ್ಮ ಸುಬ್ಬಾಭಟ್ಟನ ದುರ್ಗುಣಗಳಿಗೆ ಹೊಂದಿಕೊಂಡ ದುಷ್ಟ ಹೆಂಗಸು. ಬಡತನದ ಕಾರ್ಮುಗಿಲು ಈಕೆಯ ಸಂಸಾರದಲ್ಲಿ ಕವಿದಿತ್ತು. ಈಕೆ ಬ್ರಾಹ್ಮಣರ ಕುಟುಂಬದಲ್ಲಿ ಜನ್ಮಿಸಿದ್ದರೂ ಸಹ ಬ್ರಾಹ್ಮಣರಲ್ಲಿರಬೇಕಾದ ಸದ್ಗುಣಗಳು ಈಕೆಯಲ್ಲಿ ಒಂದೂ ಕಾಣುತ್ತಿರಲಿಲ್ಲ. ತನ್ನ ಗಂಡನಂತೆ ರಂಗೋಲೆ ಕೆಳಗೆ ನುಣುಚಿಕೊಳ್ಳುವಂತಹ ಸ್ತ್ರೀ. ಸ್ವಭಾವತಃ ಕಾಮಕ್ರೋಧಾದಿ ದುರ್ಗುಣಗಳು ಈಕೆಯಲ್ಲಿ ಅಂಟಿಕೊಂಡು, ಉಂಡಮನೆಗೆ ಎರಡು ಬಗೆಯುವ ಬುದ್ಧಿ ಇವಳಲ್ಲಿ ಬೇರೂರಿತ್ತು.

ಚೆನ್ನವ್ವ ಪುಟ್ಟತಾಯಮ್ಮನ ಹಿರಿಯ ಸೊಸೆ. ಪುಟ್ಟತಾಯಮ್ಮನ ಸಂಸಾರದಲ್ಲಿ ಯಾವ ರೀತಿ ಹೊಂದಿಕೊಂಡು ನಡೆದುಕೊಳ್ಳಬೇಕೆಂಬುದನ್ನು ಈಕೆ ಅರಿತಿದ್ದಳು. ಮಾವಂದಿರಲ್ಲಿ ವಿಧೇಯತೆ, ಗಂಡನಲ್ಲಿ ಪ್ರೀತಿ, ಮೈದುನನಲ್ಲಿ ವಿಶ್ವಾಸ, ಲಕ್ಷ್ಮಿಯಲ್ಲಿ ಸಹೋದರೀ ಪ್ರೇಮ,—ಈ ಗುಣಗಳಿಂದ ಚೆನ್ನವ್ವೆ

ಗುಣಲಕ್ಷ್ಮಿಯಾಗಿದ್ದಳು. ಮನೆಯ ಕೆಲಸಗಳನ್ನು ಜಿಗುಪ್ಸೆ ಇಲ್ಲದೆ, ಮನಃಪೂರ್ವಕವಾಗಿ ಮಾಡುತ್ತಿದ್ದಳು. ಯಾವ ವಿಧವಾದ ದುರಾಲೋಚನೆಗಳಿಗೂ, ದುರ್ಬೋಧನೆಗಳಿಗೂ, ಈಕೆ ಮನಸ್ಸನ್ನು ಕೊಡುತ್ತಿರಲಿಲ್ಲ. ತನ್ನ ಹೆಸರಿಗೆ ಅನ್ವರ್ಥವಾಗಿ ಈಕೆ ಗುಣಶಾಲಿನಿಯಾಗಿದ್ದಳು.

ಲಕ್ಷ್ಮಿಯು ಪುಟ್ಟತಾಯಮ್ಮನ ಕಿರಿಯ ಸೊಸೆ. ರಾಮಯ್ಯನ ಗುಣಕ್ಕೆ ತಕ್ಕ ಗುಣವನ್ನು ಹೊಂದಿದ್ದ ಹೆಂಡತಿ; ತನ್ನ ರೂಪಕ್ಕೆ ಪ್ರಾಧಾನ್ಯವನ್ನು ಕೊಟ್ಟುಕೊಂಡು ತನ್ನಂತಹ ರೂಪವತಿಯರು ಯಾರೂ ಇಲ್ಲವೆಂದೇ ತಿಳಿದುಕೊಂಡಿದ್ದ ಸಂಕುಚಿತ ಮನೋಭಾವವುಳ್ಳ ಹೆಂಗಸು. ಆದ್ದರಿಂದ, ಇವಳು ರೂಪದಲ್ಲಿ ಮಾತ್ರ ಲಕ್ಷ್ಮಿ; ಚೆನ್ನವ್ವನಂತೆ ಗುಣದಲ್ಲಲ್ಲ. ಸ್ವಭಾವತಃ ದುರಭಿಪ್ರಾಯವುಳ್ಳವಳಲ್ಲದಿದ್ದರೂ, ಕುಹಕಿಗಳ ದುರಭಿಪ್ರಾಯಕ್ಕೆ ಈಕೆಯ ಮನಸ್ಸು ಸೋಲುತ್ತಿತ್ತು ; ಕಬ್ಬಿಣವನ್ನು ಆಕರ್ಷಿಸುವ ಅಯಸ್ಕಾಂತದಂತೆ. ಚೆನ್ನವ್ವನ ಗುಣಗಳಿಗೆ ಈಕೆಯ ಗುಣಗಳು ತದ್ವಿರುದ್ಧವಾಗಿದ್ದವು. ಹೆಸರಿಗೂ ರೂಪಕ್ಕೂ ತಕ್ಕ ಗುಣಗಳು ಈಕೆಯಲ್ಲಿ ಲೇಶಾಂಶವೂ ಇರಲಿಲ್ಲ.

ಲಕ್ಷ್ಮಿ ಮತ್ತು ಜಲಜಾಕ್ಷಮ್ಮನವರ ಸ್ನೇಹ ಚಿತ್ರವೂ ಕೂಡ ದುರಭಿಮಾನಿಗಳನ್ನು ದುರಭಿಮಾನಿಗಳು ಯಾವ ರೀತಿ ಹಳ್ಳಿಗಳಲ್ಲಿ ಹೊಂದಿಕೊಳ್ಳುತ್ತಾರೆಂಬುದನ್ನು ತೋರಿಸುತ್ತದೆ. ಹಳ್ಳಿಯ ವಾತಾವರಣವನ್ನು ಕೆಡಿಸುವುದರಲ್ಲಿ ನೀಚಪುರುಷರಂತೆ ದುಷ್ಟ ಸ್ತ್ರೀಯರೂ ಸರಿಪಾಲುದಾರರೆಂಬುದಕ್ಕೆ ಇವರೇ ಸಾಕ್ಷಿ.

ಆದಿಕರ್ಣಾಟಕರ ತಿಪ್ಪಿಯಂತೆ, ಹಳ್ಳಿಗಳ ದುಷ್ಟರ ಕುತಂತ್ರಕ್ಕೆ ಒಳಗಾಗಿ ಮಾಡಬಾರದ ಕೆಲಸವನ್ನು ಮಾಡಲೂ ಸಹ ಹೇಸದೆ ಇರತಕ್ಕಂತಹ ಹೆಂಗಸರು ಸಾಮಾನ್ಯವಾಗಿರುತ್ತಾರೆ. ಇವರು ಹುಟ್ಟಾ ಅಜ್ಞಾನಿಗಳು ; ಹಣದಾಸೆಗಾಗಿ ಪಾಪಕ್ಕೆ ಕೈಯಿಡತಕ್ಕವರು. ಲಕ್ಷ್ಮಿಯ ಪ್ರೇರಣೆಯಂತೆ ತಿಪ್ಪಿ ಚೆನ್ನವ್ವೆಯ ಮಗುವಿಗೆ ವಿಷವಿಡುತ್ತಾಳೆ.

ಸಂಸಾರಗಳು ಸುಗಮವಾಗಿ ನಡೆದುಕೊಂಡುಹೋಗಬೇಕಾದರೆ, ಹಾಗೂ ಒಡೆಯುವುದಕ್ಕೆ ಗಂಡಸು ಕಾರಣ ಎಂದು ಹೇಳುತ್ತಾರೆ; ಆದರೆ ಸ್ತ್ರೀಯರೂ ಸಂಸಾರದ ಒಡಕುತನಕ್ಕೆ ಯಾವ ರೀತಿ ಕಾರಣಭೂತರಾಗುತ್ತಾರೆ ಎಂಬುದನ್ನು 'ಚಂದವಳ್ಳಿಯ' ಈ ದುಷ್ಟ ಸ್ತ್ರೀಪಾತ್ರಗಳು ತೋರ್ಪಡಿಸುತ್ತವೆ. ಇಲ್ಲಿನ

ಸ್ತ್ರೀ ಪ್ರಪಂಚ ಪುರುಷ ಪ್ರಪಂಚದಂತೆಯೇ ನೆರಳು ಬೆಳಕುಗಳಿಂದ ಕೂಡಿ, ಜೀವನದ ಕನ್ನಡಿಯಾಗಿದೆ.

—ಡಿ. ಎಸ್. ನಾರಾಯಣಪ್ಪ
(Pu.C.,H.)

---

# ಕರಿಯಪ್ಪನ ಕುತಂತ್ರ

ಕರಿಯಪ್ಪ !

ಇವನ ಹೆಸರು ಕೇಳುತ್ತಲೇ ಏನೋ ಒಂದು ವಿಧವಾದ ಕಾರ್ಗತ್ತಲೆ ಕವಿದಂತಾಗಿ, ಪಿಶಾಚರ ನಡೆದುಬಂದಂತೆ, ಭಯ ಮೂಡುತ್ತದೆ. ಕಾರ್ಮುಗಿಲು ರವಿಯ ಪ್ರಕಾಶವನ್ನು ಮುಸುಕಿದಾಗ ಜನರ ಅನಾದರಣೆಗೀಡಾಗುವಂತೆ, ಕರಿಯಪ್ಪನು ಕಾದಂಬರಿಯನ್ನು ಹೊಕ್ಕು, ಅಸಹ್ಯಭಾವನೆಯನ್ನುಂಟುಮಾಡುತ್ತಾನೆ. ಇವನು ಕಪಟಿ, ಕುತಂತ್ರಿ ಎಂದರೆ ತಪ್ಪಾಗಲಾರದು. ಇವನು ಚಂದವಳ್ಳಿಗೆ ಕಾಲಿಟ್ಟಾಗಲೇ ಚಂದವಳ್ಳಿಗೆ ದುರ್ಭಿಕ್ಷೆಯುಂಟಾಯಿತು. ಇವನಿಂದ ಶಿವನಂಜೇಗೌಡನ ಸಂಸಾರ, ಅಷ್ಟೇ ಏನು ? ಚಂದವಳ್ಳಿಗೆ ಚಂದವಳ್ಳಿಯೇ ನಾಶವಾಯಿತು. ಯಾವ ಚಂದವಳ್ಳಿ ಮೊದಲು ಹತ್ತಾರು ಕಡೆಗಳಲ್ಲಿ ಪ್ರಸಿದ್ಧವಾಗಿತ್ತೋ, ಅದು ಈಗ, ಈ ಕರಿಯಪ್ಪನಿಂದ ಹೇಳಹೆಸರಿಲ್ಲದಂತಾಯಿತು.

ತ.ರಾ.ಸು. ರವರ ಈ ಕಾದಂಬರಿಯನ್ನು (' ಚಂದವಳ್ಳಿಯ ತೋಟ ') ಓದಿದವರೆಲ್ಲರೂ ಹೇಳಬಲ್ಲರು, ಕರಿಯಪ್ಪನ ದುರ್ಗುಣಗಳನ್ನು ! ಕೆಲವರು ವಿಮರ್ಶಿಸಿ ಸುಬ್ಬಾಭಟ್ಟನ ಕೈಚಳಕವೂ ಇದರಲ್ಲಿದೆ ಎನ್ನಬಹುದು. ಆದರೆ.... ಆದರೆ ಏನು ? ಕರಿಯಪ್ಪನು ಸುಬ್ಬಾಭಟ್ಟನ ಬಲಗೈ ಬಂಟ. ಅವನಿಲ್ಲದಿದ್ದರೆ ' ಇಷ್ಟು ಮಾಡಲಾಗುತ್ತಿರಲಿಲ್ಲ 'ವೆಂದು ಸುಬ್ಬಾಭಟ್ಟ ಮತ್ತು ಅವನ ಶ್ರೀಮತಿಯವರೇ ಒಪ್ಪುತ್ತಾರೆ. ಕರಿಯಪ್ಪ ತನ್ನ ಬಾಲ್ಯದಿಂದಲೇ ಇದನ್ನು ಕಲಿತನೋ ? ಅಥವಾ ಮನೆಯಿಂದ ಓಡಿಹೋದಮೇಲೆಯೇ ಕಲಿತನೋ ? ಇದು ತಿಳಿಯದು. ಆದರೆ ಇಷ್ಟು ಹೇಳಬಹುದು : ಕರಿಯಪ್ಪ ಬಾಲ್ಯದಿಂದಲೂ ಅಭ್ಯಾಸಮಾಡಿದ ಕೆಟ್ಟ ಚಾಳಿಗಳಿಂದಲೂ, ತಂದೆತಾಯಿಗಳು ಇವನನ್ನು ಇವನ ದಾರಿಗೇ ಬಿಟ್ಟದ್ದರಿಂದಲೂ, ಕರಿಯಪ್ಪ ಈ ರೀತಿ " ಚಂದವಳ್ಳಿಯ ದುರ್ದೈವ"ವಾದ !

ಕರಿಯಪ್ಪ ಎಷ್ಟು ಮಾರ್ಪಾಟು ಹೊಂದಿದ್ದನೆಂಬುದು, ಅವನು ಎಂದೋ ಮನೆಬಿಟ್ಟು ಓಡಿಹೋದವನು ಇಂದು ಬಂದು, ತನ್ನ ತಂದೆ ಗತಿಸಿದರಲ್ಲಾ ಎನ್ನುವ ದುಃಖಕ್ಕಿಂತ ತನಗೇನೂ ಆಸ್ತಿ ಬಿಟ್ಟುಹೋಗಲಿಲ್ಲವಲ್ಲಾ ಎಂದು ದುಃಖಿಸಿದುದರಿಂದ ತಿಳಿಯುತ್ತದೆ. ಎಂಥ ಅಧೋಗತಿ! ಇನ್ನು ಅವನ ಅಶ್ಲೀಲಕ್ಕೆ ಉದಾಹರಣೆ: ಒಂದು ದಿನ ಕರಿಯಪ್ಪ, ಹಿಂದೆ ತನ್ನ ತಂದೆಯು ದಾಗಿದ್ದು, ಈಗ ಬೇರೆಯವರಿಗೆ ಸೇರಿದ್ದ ಹೊಲಕ್ಕೆ ಆ ರೈತನ ಹೆಂಡತಿ ಬುತ್ತಿ ಯನ್ನು ತೆಗೆದುಕೊಂಡು ಹೋಗುತ್ತಿದ್ದಾಗ, "ಇದು ನಮ್ಹೊಲ, ಇದರ್ಲ್ಯಾವ ಕಾಲಿಕ್ಕಿದರೆ, ನಿನ್ನ ಹೆಂಗಸ್ತನ ಕೆಡಿಸ್ಬಿಡ್ತೀನಿ" ಎಂದು ಕೆಣಕಿದುದು.

ಕರಿಯಪ್ಪನ ಕುತಂತ್ರಗಳನ್ನು ವಿವರಿಸುವುದೇ ಕಷ್ಟವಾದೀತು, ಸದ್ಗುಣಿ ಗಳಿಗೆ. ಕರಿಯಪ್ಪ ಬಂದಾಗಲೇ ಹಳ್ಳಿಯವರ ಜತೆ ಜಗಳ ತೆಗೆದದ್ದು ಅವನು ಕುತಂತ್ರಗಳಿಗೆ ಅಡಿಪಾಯವೆಂದು ಹೇಳಬಹುದು. ತನ್ನ ಒರಟುತನದಿಂದ ಅವನು ಸಮಾಜದಿಂದ ಹೊರಗಿರಬೇಕಾಯಿತು. ಆದರೂ ಅವನು ಧೃತಿಗೆಡಲಿಲ್ಲ. ಇಲ್ಲಿನಿಂದ ಚಂದವಳ್ಳಿಯನ್ನು ತ್ಯಜಿಸುವವರೆಗೆ, ಅವನ ಕುತಂತ್ರಗಳಿಗೆ ಎಣೆ ಇಲ್ಲವಾಯಿತು. ಸುಬ್ಬಾಭಟ್ಟನ ಗೆಳೆತನವನ್ನು ಮಾಡಿ ಊರಿಗೇ ದೊಡ್ಡ ತಲೆ ಯಾದ ಶಿವನಂಜೇಗೌಡನನ್ನು ಅಧೋಗತಿಗಿಳಿಸಿದ.

ಊರಿಗೆ ಊರೇ ಒಪ್ಪಿದ ತೀರ್ಮಾನವನ್ನು ಕರಿಯಪ್ಪ ಒಪ್ಪದೆ, ತನ್ನದೇ ಆದ ಒಂದು ಕುತರ್ಕದ ವಾದ ಹೂಡಿದ. ಎಂದೂ, ಯಾರೂ ಊರ ಪಂಚಾಯಿತಿಯ ಮುಖ್ಯಸ್ಥನಾದ ಶಿವನಂಜೇಗೌಡನ ಮಾತನ್ನು ತೆಗೆದುಹಾಕಿರ ಲಿಲ್ಲ. ಇಂದು ಕರಿಯಪ್ಪ ಅವರ ಮಾತನ್ನು ಅಲ್ಲಗಳೆದು, ತಾನು ಮಾಡಿದುದು ತಪ್ಪು ಎಂದು ಒಪ್ಪಿದರೂ, ಅವರು ಕೊಟ್ಟ ತೀರ್ಮಾನಕ್ಕೆ ಎದುರಾಳಿಯಾದನು. ಇವನ ಈ ನಡತೆಯಿಂದ, ಹಳ್ಳಿಯವರಾರೂ ಸಹಕರಿಸದಿದ್ದುದರಿಂದ, ಕರಿಯಪ್ಪ ಹೆಚ್ಚು ದಿನ ಚಂದವಳ್ಳಿಯಲ್ಲಿರಲಾಗಲಿಲ್ಲ. ಆದುದರಿಂದ ಅವನು ಊರುಬಿಟ್ಟು ನಾಲ್ಕು ಮೈಲಿ ಅಂತರದಲ್ಲಿನ ಅಜ್ಜನಹಟ್ಟಿಗೆ ಹೋಗಬೇಕಾಯಿತು. ಆದರೆ ಕರಿಯಪ್ಪ ಈ ಪ್ರಕರಣವನ್ನು ಅಷ್ಟಕ್ಕೇ ಮರೆಯಲಿಲ್ಲ. ಅಜ್ಜನಹಟ್ಟಿಯ ಸಾಹುಕಾರ. ಶಿವನಂಜೇಗೌಡನ ಎದುರಾಳಿ, ತಿಪ್ಪಾರೆಡ್ಡಿಯನ್ನು ಸೇರಿ, ಲಾಯರ್ ನೋಟೀಸ್ ಕೊಡಿಸಿದನು. ಅವನನ್ನು ಹೊಗಳಿ ಸ್ವರ್ಗಕ್ಕೇರಿಸಿದ ಕರಿಯಪ್ಪ! ಆದರೆ ಶಿವನಂಜೇಗೌಡ, ಕೋರ್ಟಿಗೆ ಹೋಗಲು ಇಷ್ಟವಿಲ್ಲದೆ, ತಮ್ಮ ಲಾಯರ್‌ಗೆ ಹೇಳಿ ತಮ್ಮತಮ್ಮಲ್ಲಿ ರಾಜಿಮಾಡಿಸಿಕೊಂಡನು.

ಯಾರನ್ನು ತಾವು ಹಳ್ಳಿಯಿಂದ ಹೊರಗೆ ಹಾಕಿದ್ದರೋ ಅಂಥವನು ಮತ್ತೆ ಪ್ರಬಲನಾಗಿ ಹಳ್ಳಿಗೆ ಬಂದು ನೆಲೆಸಿರುವುದನ್ನು ಕಂಡು, ಶಿವನಂಜೇಗೌಡ ಮುಂತಾದ ಊರ ಮುಖ್ಯಸ್ಥರಿಗೆ ತಲೆಯೆತ್ತಿ ತಿರುಗುವುದೇ ಕಷ್ಟವಾಯಿತು. ಆದರೂ....ಕರಿಯಪ್ಪನನ್ನು ಕಂಡರೆ, ವಿಷಸರ್ಪವನ್ನು ಕಂಡಂತೆ ದೂರ ಸರಿಯುತ್ತಿದ್ದರು. ಕರಿಯುಪ್ಪ ಇದನ್ನು ಕಂಡು, ಸ್ವಾರ್ಥಸಾಧನೆಯ ದೂರಾಲೋಚನೆಯಿಂದ, ಜಂಬವನ್ನು ಬಿಟ್ಟು ಪ್ರೀತಿಯನ್ನು ನಟಿಸತೊಡಗಿದನು. ಇದು ಯಾರಿಗೂ ಬೇಕಿರಲಿಲ್ಲ. ಚಂದವಳ್ಳಿಯಲ್ಲಿ ಕರಿಯಪ್ಪನ ಗೆಲುವಿನಿಂದ ಬಹು ಜನ ಅಸಂತುಷ್ಟರಾದರೂ, ಅಂತರಂಗದಲ್ಲಿ ಸಂತೋಷಪಡುವ ವ್ಯಕ್ತಿ ಒಂದಿತ್ತು, ಚಂದವಳ್ಳಿಯಲ್ಲಿ—'ಊರಿದ್ದಲ್ಲಿ ಹೊಲಗೇರಿ ಇರುವಂತೆ'. ಅವನೇ 'ಉಂಡ ಮನೆಗೆ ಎರಡು ಬಗೆದ ದ್ರೋಹಿ'—ಸುಬ್ಬಾಭಟ್ಟ. ಕರಿಯಪ್ಪನಿಗೆ ಇದು ಗೊತ್ತಿರಲಿಲ್ಲವಾದರೂ, ಒಂದು ಅತಿ ಸಣ್ಣ ಕಾರಣದಿಂದ ಸುಬ್ಬಾಭಟ್ಟನ ಗೆಳೆತನ ಬೆಳೆಸಿದನು. ಇದರಿಂದ ಇವರಿಬ್ಬರೂ ಸೇರಿದ್ದು 'ಗಾಳಿ–ಮಳೆ' ಸೇರಿದ ಹಾಗಾಯಿತು. ಮೊದಮೊದಲು ಕರಿಯಪ್ಪನ ಸ್ನೇಹಿತ ಮಾತ್ರ ಆಗಿದ್ದ ಸುಬ್ಬಾಭಟ್ಟ ಈಗ ಅವನ ಅಂತರಂಗ ಸಚಿವನಾದ. ಸುಬ್ಬಾಭಟ್ಟನ ಮಾತು ಕರಿಯಪ್ಪನಿಗೆ ವೇದವಾಕ್ಯವಾಗಿತ್ತು. ಇದನ್ನು ಕಂಡು ಬೇಸರಿಸಿದ ಶಿವನಂಜೇಗೌಡ ಸುಬ್ಬಾಭಟ್ಟನಿಗೆ ಬುದ್ಧಿ ಹೇಳಲು ಬಂದಾಗ, ಕರಿಯಪ್ಪನ ಮೇಲೆ ಗೌಡನಿಗೆ ನುರುಕ ಹುಟ್ಟಿಸಿದ ಸುಬ್ಬಾಭಟ್ಟ. ಕರಿಯಪ್ಪನನ್ನು ಸಮಾಜದಲ್ಲಿ ತಲೆ ಎತ್ತುವಂತೆ ಮಾಡಿದ. ಮುಂದೆ ರಾಮಯ್ಯನ ಗೆಳೆತನ ದೊರೆತದ್ದು, ಕರಿಯಪ್ಪ ತನ್ನ ಕುತಂತ್ರದ ಬಲೆ ಬೀಸಲು ಇನ್ನಷ್ಟು ನೆರವಾಯಿತು.

ಶಿವನಂಜೇಗೌಡನಿಗೆ ಹನುಮಯ್ಯ–ರಾಮಯ್ಯ ಎಂಬಿಬ್ಬರು ಪುತ್ರರಿದ್ದರು. ಹನುಮಯ್ಯ ಕಷ್ಟಪಟ್ಟು ಕೆಲಸ ಮಾಡುತ್ತಿದ್ದ. ಊರಿನವರ ಕೈಯಲ್ಲಿ ಭೇಷ್! ಎನಿಸಿಕೊಳ್ಳುತ್ತಿದ್ದ. ಆದರೆ ರಾಮಯ್ಯ ಸೋಮಾರಿಯಾಗಿ, ಬರುಬರುತ್ತಾ ಪುಂಡನಾಗಿ, ಕಡೆಗೆ ಕರಿಯಪ್ಪ ಸುಬ್ಬಾಭಟ್ಟರ ಬಲೆಗೆ ಬಿದ್ದ; ಬೆಂಕಿಗೆ ಸಿಲುಕಿದ ಪತಂಗದಂತೆ.' ಬರುಬರುತ್ತಾ ರಾಮಯ್ಯ ಮನೆಗೆ ಬರುವುದೇ ಕಷ್ಟನಾಯಿತು. ಹೊರಗಿನವರಿಗೆ ತಿಳಿಯದ ಹಾಗೆ 'ಇಸ್ಪೀಟಾಟದ ಮನೆ'ಯಾಗಿದ್ದ ಕರಿಯಪ್ಪನ ಮನೆಯಲ್ಲಿ ರಾಮಯ್ಯನೂ ಭಾಗಿಯಾಗಲು ಮೊದಲುಮಾಡಿದ. ಇದನ್ನು ಹೇಗೋ ಅನುಮಾನದಿಂದ ಅರಿತುಕೊಂಡಿದ್ದ ತನ್ನ ಭಾರ್ಯೆಯಿಂದ ಹನುಮಯ್ಯ ತಿಳಿದು 'ಹೆಡೆ ತುಳಿದ ಸರ್ಪ'ದಂತಾದ. ಅವನೂ ಸಹ ತನ್ನ ತಮ್ಮ ಕರಿಯಪ್ಪನ

ಮನೆಯಲ್ಲಿ ಇಸ್ಪೀಟಾಡುತ್ತಿದ್ದುದನ್ನು ನೋಡಿ, ಕರಿಯಪ್ಪನ ಅನುಮತಿಯಿಂದ ಒಳಗೆ ಹೋದಾಗ, ಅಲ್ಲಿ ನೋಡಿದುದೇನು ? ಬರಿಯ ಬೀಡಿಯ ಹೊಗೆ ಮಾತ್ರ!

ಮಾರನೆಯ ದಿನ ಮನೆಗೆ ಬಂದಾಗ, ಇದೆಲ್ಲವನ್ನೂ ತಿಳಿದುಕೊಂಡಿದ್ದ ಶಿವನಂಜೇಗೌಡ, ರಾಮಯ್ಯನನ್ನು ಹಣ್ಣುಗಾಯಿ ನೀರುಗಾಯಿ ಆಗುವಹಾಗೆ ಬಡಿದ. ಇದರಿಂದ ರಾಮಯ್ಯ ಮನೆಬಿಟ್ಟು ಹೊರಟ....ಕರಿಯಪ್ಪನ ಮನೆಗೆ ! ಆದರೆ ಇದರಿಂದ ಕರಿಯಪ್ಪನ ಕುತಂತ್ರಕ್ಕೆ ಕಲ್ಲು ಬೀಳುತ್ತಿತ್ತು. ಆದುದರಿಂದ ಕುದಿಯುವ ಸಾರಿಗೆ ಉಪ್ಪು ಹುಳಿ ಸೇರಿಸಿ, ರಾಮಯ್ಯನನ್ನು ಮತ್ತೆ ಮನೆಗೆ ಸೇರಿಸಿದ ಕರಿಯಪ್ಪ. ಸುಬ್ಬಾಭಟ್ಟರ ಮಾತಿನಿಂದ, ರಾಮಯ್ಯ ಸರಿಹೋಗ ಬಹುದೆಂದು ನೆನೆದ ಗೌಡರು, ಮಗನಿಗೆ ಮದುವೆ ಮಾಡಿದರು ; 'ಗಾಯಕ್ಕೆ ಉಪ್ಪು ಸವರಿದಂತೆ.'

ಮೊದಮೊದಲು ಒಳಗೊಳಗೇ ಕುದಿಯುತ್ತಿದ್ದ ರಾಮಯ್ಯನ ಹೆಂಡತಿ ಲಕ್ಷ್ಮಿ, ಶಿವನಂಜೇಗೌಡನ ಮನೆತನಕ್ಕೆ ಮಾರಿಯಾದಳು. ಒಂದು ದಿನ ಮನೆಯಲ್ಲೇನೋ ಸಣ್ಣ ಜಗಳವಾದ್ದರಿಂದ, ಅದನ್ನು ರಾಮಯ್ಯನಿಗೆ ಉಪ್ಪು ಕಾರ ಸವರಿ ಹೇಳಿ, ಉರಿಯುತ್ತಿದ್ದ ದೀಪಕ್ಕೆ ಎಣ್ಣೆ ಸುರಿದಳು, ಲಕ್ಷ್ಮಿ; ಜಲಜಾಕ್ಷಮ್ಮನ ಮಾತುಗಳನ್ನು ಕೇಳಿ ! ಇದಲ್ಲದೆ ಸುಬ್ಬಾಭಟ್ಟ–ಜಲಜಾಕ್ಷಮ್ಮ, ಇವರೂ ಸಹ ರಾಮಯ್ಯನನ್ನು ಈ ವಿಷಯದಲ್ಲಿ ಕೆಣಕಿದರು. ಇವರಲ್ಲದೆ ಕರಿಯಪ್ಪನೂ ಸಹ! ಇವರಾಡಿದ ಮಾತುಗಳನ್ನು ಕೇಳಿ ರಾಮಯ್ಯನಿಗೆ ಪಿತ್ತ ಕೆರಳಿತು. ತಂದೆ ಬದುಕಿದ್ದಾಗಲೇ ಪಾಲಾಗಲು ನಿರ್ಧರಿಸಿದ, ರಾಮಯ್ಯ. ಯಾರು ಏನು ಹೇಳಿದರೂ ಕೇಳಲಿಲ್ಲ, ತಾನೇ ಸರ್ವಜ್ಞನೆಂಬಂತೆ ! ಇದನ್ನು ಕೇಳಿದ ಶಿವನಂಜೇಗೌಡನ ಎದೆಯೊಡೆಯಿತು. ಮನೆಯವರೆಲ್ಲರೂ ದುಃಖಿಸಿ ದರು, ಲಕ್ಷ್ಮಿಯೊಬ್ಬಳನ್ನುಬಿಟ್ಟು. ಆದರೆ ರಾಮಯ್ಯ ಇದಾವುದಕ್ಕೂ ಜಗ್ಗಲಿಲ್ಲ. ಕಡೆಗೆ ಪಕ್ಕದ ಹಳ್ಳಿಯ ಶ್ಯಾನುಭೋಗನನ್ನು ಕರೆಸಿ, ಆಸ್ತಿಯ ಪಟ್ಟಿ ಮಾಡಿಸಿ, ತನಗೇ ಹೆಚ್ಚಿನ ಪಾಲು ಬರುವಂತೆ ಮಾಡಿಸಿ, ಎಲ್ಲವನ್ನೂ ಪಾಲುಮಾಡಿಸಿದ. ಇದೆಲ್ಲದಕ್ಕಿಂತ ಶಿವನಂಜೇಗೌಡ, ಧರ್ಮಕ್ಕೆಂದು ಬಿಟ್ಟಿದ್ದ, ಬೆವರು ಸುರಿಸಿ ಬೆಳಸಿದ್ದ ತೋಟವನ್ನು, ರಾಮಯ್ಯ ಜಗಳವಾಡಿ ಕಸಿದುಕೊಂಡ. ಅಂದು, ನಂದನದಂತಿದ್ದ ಗೌಡನ ಮನೆ ನರಕವಾಯಿತು. ರಾಮಯ್ಯ ತನ್ನ ತಾಯಿಯ ಮೈಮೇಲಿದ್ದ ಒಡವೆಗಳನ್ನು ಕೂಡ ಪಾಲು ಮಾಡಿಸಿದ. ಹನುಮಯ್ಯ ಇದನ್ನು ತಡೆಯಲಾರದೆ, ತಮ್ಮನನ್ನು ತೆಗಳಿ, ತನ್ನ ಪಾಲಿಗೆ ಬಂದಿದ್ದ ಒಡವೆ ಗಳನ್ನು ಅವನಿಗೇ ಬಿಟ್ಟುಕೊಟ್ಟ. ಇದಾದ ಎಂಟು ದಿವಸಗಳಲ್ಲಿ ಪುಟ್ಟತಾಯಮ್ಮ

ಅಪಮಾನವನ್ನು ತಡೆಯಲಾರದೆ ನೇಣು ಹಾಕಿಕೊಂಡಳು. ಹನುಮಯ್ಯ-ರಾಮಯ್ಯ ಬೇರೆಯಾದರು. ರಾಮಯ್ಯನಿಗೆ ಬುದ್ಧಿ ಬರತೊಡಗಿ, ಅಣ್ಣನ ಜೊತೆಯಲ್ಲೇ ಬಾಳಲು ಪ್ರಯತ್ನಿಸಿದ. ಆದರೆ ಕರಿಯಪ್ಪ ಸುಬ್ಬಾಭಟ್ಟರು ಅದನ್ನು ತಡೆದರು; ತಮ್ಮ ಹಿತಕ್ಕಾಗಿ ಗೌಡನ ಮನೆಯನ್ನು ಒಡೆದು ಆ ಉರಿಯುವ ಮನೆಯಲ್ಲಿ ಆದಷ್ಟು ಗಳ ಹಿರಿಯಬೇಕೆಂಬುದೇ ಅವರ ದುರುದ್ದೇಶವಾಗಿತ್ತು! ಬರುಬರುತ್ತಾ ಅಣ್ಣತಮ್ಮಂದಿರಲ್ಲಿ ದ್ವೇಷದ ಹೊಗೆ ಹೊರಹೊಮ್ಮಿತು. ಇದರ ಸಲುವಾಗಿ, ಅಣ್ಣನ ಕೊಡಲಿ ಹೊಡೆತಕ್ಕೆ ಸಿಕ್ಕಿ ಸತ್ತ ರಾಮಯ್ಯ; ಅಣ್ಣನ ಮಗುವನ್ನು ಅವನ ಹೆಂಡತಿ ವಿಷಹಾಕಿಸಿ, ಕೊಲ್ಲಿಸಿದ ಪರಿಣಾಮವಾಗಿ. ಇದರ ಸಲುವಾಗಿ ಜೈಲಿಗೆ ಹೋದ ಹನುಮಪ್ಪ. ಅಲ್ಲಿಯೇ ಕೊರಗಿ ಪ್ರಾಣಬಿಟ್ಟ. ಇಷ್ಟೆಲ್ಲವನ್ನೂ ನೋಡಿದ ಶಿವನಂಜೇಗೌಡನಿಗೆ ಹುಚ್ಚು ಹಿಡಿಯಿತು.

ಇಷ್ಟೆಲ್ಲಾ ಆದರೂ ಕರಿಯಪ್ಪನಿಗೆ ತನ್ನ ಹುಚ್ಚು ತೀರಲಿಲ್ಲ. ತಿಪ್ಪಾರೆಡ್ಡಿ, ತಾನು ರಾಮಯ್ಯನಿಗೆ ಕೊಟ್ಟ ಸಾಲವನ್ನು ಹಿಂದಿರುಗಿಸೆಂದು ಲಕ್ಷ್ಮಿಯನ್ನು ಪೀಡಿಸುತ್ತಿದ್ದ. ಆ ಹೊಣೆಯನ್ನೂ ತಾನೇ ಹೊತ್ತುಕೊಂಡ ಕರಿಯಪ್ಪ; ಪ್ರತಿಫಲವಾಗಿ, ಅವಳ ಆಸ್ತಿಯನ್ನಲ್ಲದೆ, ಅವಳನ್ನೂ ತನ್ನ ಆಸ್ತಿಯನ್ನಾಗಿ ಮಾಡಿಕೊಂಡ. ಇದರಿಂದ ಅವನಿಗೆ ತೋಟವೂ ದಕ್ಕಿತು, "ಒಂದೇ ಹೊಡೆತಕ್ಕೆ ಎರಡು ಪಕ್ಷಿಗಳು ಸಿಕ್ಕಿದ ಹಾಗೆ." ಆ ಆಸ್ತಿಯಿಂದಲೇ ಸಾಹುಕಾರನಾದ, ಕುತಂತ್ರಿ ಕರಿಯಪ್ಪ.

ಹೀಗೆ, ಚಂದವಳ್ಳಿಯ ಅಂದಚಂದಗಳಿಗೆ ಕರಿಗೆರೆಯನ್ನೇ ಎಳೆದ ಕರಿಯಪ್ಪ! ಹಾಳುಬಿದ್ದ ಹಳ್ಳಿಗೆ ಸಾರ್ವಭೌಮನಾದ!

—ಪಿ. ವಿ. ರಘುನಾಥ್
(Pu.C.,D.)

---

# 'ಚಂದವಳ್ಳಿಯ ತೋಟ'ದಲ್ಲಿ ಕಾಣಬರುವ ಹಳ್ಳಿಯ ಜೀವನಚಿತ್ರ

ಭಾರತ ಹಳ್ಳಿಗಳ ದೇಶ. ಭಾರತವು ಏಳಿಗೆಗೆ ಬರಲು ತಡವಾಗಿರುವುದಕ್ಕೆ ಸಂಬಂಧಪಟ್ಟ ಹಲವಾರು ಮುಖ್ಯ ಕಾರಣಗಳಲ್ಲಿ, ಹಳ್ಳಿಯ ಅಧೋಗತಿ ಮುಖ್ಯವಾದುದು. 'ಇಂದ್ರನ ಅಮರಾವತಿಯಂತಿದ್ದ ಒಂದು ಹಳ್ಳಿ ಹೇಗೆ ನಾಶವಾಗಿ ನರಕಕ್ಕೆ ಸಮಾನವಾಯಿತು' ಎಂಬ ಒಂದು ಹಳ್ಳಿಯ ಚಿತ್ರವನ್ನು "ಈ ಚಂದವಳ್ಳಿಯ ತೋಟ"ದಲ್ಲಿ ಕಾಣಬಹುದು. ಇದೇ ರೀತಿ, ಭಾರತದ ಹಳ್ಳಿಗಳು ನಾಶವಾಗಬಾರದು, ಅವುಗಳನ್ನು ಪುನರುಜ್ಜೀವನಗೊಳಿಸಬೇಕು—ಎಂಬ ಅಂಶ ಈ ದುರಂತ ಸಂದರ್ಭದಿಂದಾದರೂ ಬೋಧೆಯಾಗಬೇಕೆಂಬುದು ಈ ಕಾದಂಬರಿಯ ಮುಖ್ಯೋದ್ದೇಶ.

ಚಂದವಳ್ಳಿ ಒಂದು ಸಣ್ಣ ಗ್ರಾಮ. ಎರೆಸೀಮೆಯ ಕಪ್ಪು ನೆಲದಿಂದ ಕೂಡಿದ್ದರೂ ಪ್ರಕೃತಿಸೌಂದರ್ಯದ ತವರೂರಾಗಿ ಸುತ್ತಲ ಹಳ್ಳಿಗಳಿಗೆಲ್ಲಾ ಮಾದರಿಯಾಗಿತ್ತು. ಹೀಗಿದ್ದರೂ, ಆ ಹಳ್ಳಿಯಲ್ಲಿ ಔದಾರ್ಯಪುರುಷರಾದಂತಹ ಯಜಮಾನರುಗಳಿದ್ದರು. ಅಂತಹವರಲ್ಲಿ ಶಿವನಂಜೇಗೌಡನೂ ಒಬ್ಬ. ಇವನ ಬಾಲ್ಯಸ್ನೇಹಿತ, ಪ್ರಾಣಸ್ನೇಹಿತ, ಎಂದರೆ ನರಹರಪ್ಪ. ಆ ಹಳ್ಳಿಯಲ್ಲಿದ್ದ ಜನರೆಲ್ಲರೂ ಒಂದೇ ಸಂಸಾರದವರ ಹಾಗೆ, ಸಂಸಾರದ ಯಜಮಾನರ ಮಾತನ್ನು ಕಿಂಚಿತ್ತೂ ಮೀರದ ಒಡನಾಡಿಗಳಂತೆ, ಸಹಕಾರ ಸೌಹಾರ್ದಗಳಿಂದ ವರ್ತಿಸುವ ಮುಗ್ಧರು. ಊರಿಗೆ ಗೌಡನಾದ ಶಿವನಂಜೇಗೌಡನಿಗೆ ಅಪಾರ ಆಸ್ತಿ, ಹಣ ಇತ್ತು. ಆದರೆ ಇವಕ್ಕನುಗುಣವಾಗಿ ಬರುವ ಅಹಂಕಾರ, ಅಸೂಯೆ, ಅಧರ್ಮಗಳು ಇವನಿಂದ ದೂರವಾಗಿದ್ದವು. ಊರಿಗೆ ದೊಡ್ಡ ತಲೆಯಾದವನು ಈ ರೀತಿ ಇದ್ದರೆ ಹಳ್ಳಿಯು ಒಂದು ಕುಟುಂಬದಂತೆ ಅಭಿವೃದ್ಧಿಯಾಗುವುದರಲ್ಲಿ ಸಂದೇಹವಿಲ್ಲ. ಹಾಗಲ್ಲದೆ, "ಬೇಲಿಯೆದ್ದು ಹೊಲಮೆಯ್ದ"ಹಾಗೆ ಇರುವ ಗೌಡರು ತಾವೂ ಕೆಡುವುದಲ್ಲದೆ ತಮ್ಮನ್ನು ನಂಬಿದ ಹಳ್ಳಿಯನ್ನೂ, ಹಳ್ಳಿಯ ಜನರನ್ನೂ ಹಾಳು

ಮಾಡಲು ತಯಾರಾಗಿರುತ್ತಾರೆ. ಆದರೆ ಶಿವನಂಜೇಗೌಡ ತನ್ನ ಹಳ್ಳಿಗಾಗಿ ತನ್ನ ಪ್ರಾಣವನ್ನು ಬೇಕಾದರೂ ಅರ್ಪಿಸಿ ಹಳ್ಳಿಯ ಮರ್ಯಾದೆಯನ್ನು ಉಳಿಸುವಂತಹ ವ್ಯಕ್ತಿಯಾಗಿದ್ದ. ಆತ ಚಂದವಳ್ಳಿಯಲ್ಲಿದ್ದ ಬಡಕುಟುಂಬದವರಿಗೆ ಆಶ್ರಯದಾತನಾಗಿ, ಅವರಿಗೆ ತನ್ನ ಜಮೀನನ್ನೇ ಕೋರಿಗೆ ಕೊಟ್ಟು, ಅವರು ಸಂತುಷ್ಟರಾಗಿ ಸನ್ಮಾರ್ಗದಲ್ಲಿ ಜೀವನ ನಡೆಸಲು ಸಹಾಯ ಮಾಡುತ್ತಿದ್ದ. ತನ್ನ ಹಳ್ಳಿಗೆ ಯಾರಾದರೂ ವಿದ್ವಾಂಸರು ಬಂದರೆ ಯಾವುದಾದರೂ ಪುರಾಣ, ಪುಣ್ಯಕಥೆಗಳನ್ನು ಓದಿಸಿ, ಹಳ್ಳಿಯವರಿಗೆಲ್ಲಾ ಔತಣ ಮಾಡಿಸಿ, ಅವರ ಜೊತೆಯಲ್ಲಿ ತಾನೂ ಸಂತೋಷಪಡುವಂತಹ ಮನುಷ್ಯ ಶಿವನಂಜೇಗೌಡ. ಅಂದಿನ ಹಳ್ಳಿಯ ಮುಖಂಡರು ಹೀಗಿದ್ದರು. ಎಂದೇ ಚಂದವಳ್ಳಿ ಚಂದವಾಗಿತ್ತು.

ಒಂದು ಸಾರಿ, ಚಂದವಳ್ಳಿಯನ್ನು ಮತ್ತೂ ಸುಂದರಗೊಳಿಸಿ ಪ್ರಕಾಶಕ್ಕೆ ತರುವ ಅವಕಾಶ ಬಂತು. ಅದು ಅನಿರೀಕ್ಷಿತವಾಗಿ ಬಂದು, ಹಳ್ಳಿಗೆ ದೊಡ್ಡ ತಲೆ ಎನಿಸಿದ ಶಿವನಂಜೇಗೌಡನನ್ನು ಕಾಡತೊಡಗಿದ ಒಂದು ಮಹಾಕಾಂಕ್ಷೆ: ಅಂದರೆ, ಒಂದು ಸಾರಿ ಎಲ್ಲಿಗೋ ಸರ್ಕೀಟು ಹೋಗಿದ್ದ ಅಮಲ್ದಾರರು ಚಂದವಳ್ಳಿಯ ದಾರಿಯಲ್ಲಿ ಬರುತ್ತಿದ್ದರು. ಮಧ್ಯಾಹ್ನದ ಸಮಯವಾದ್ದರಿಂದ ಬೆಂಗಾಡಿನ ಸೀಮೆಯ ಬೇಗೆಯನ್ನು ಸಹಿಸಲಾರದ ಆ ವ್ಯಕ್ತಿ ಚಂದವಳ್ಳಿಯನ್ನು ಅನೇಕ ರೀತಿಯಲ್ಲಿ ಅಲ್ಲಗಳೆದು. ಶಿವ ಕೊಟ್ಟ ಬಿಸಿಲನ್ನು ಪರಿಹರಿಸಲು ಆ ಹಳ್ಳಿಯವರೆಲ್ಲಾ ಸೇರಿ ಏನಾದರೂ ಮಾಡಿ ಒಂದು ತೋಟವನ್ನು ಬೆಳೆಸಬೇಕೆಂದು ಹೇಳಿದರು. ಹಳ್ಳಿಗೆ ಬರುವವರೆಲ್ಲಾ ಚಂದವಳ್ಳಿಯನ್ನು ಹೊಗಳಿ ಹೋಗುತ್ತಿದ್ದರು; ಆದರೆ ತಮ್ಮ ಹಳ್ಳಿ ಹೀಗೆ ಕೊಪ್ಪಕ್ಕಿಂತ ಕಡೆ ಎಂಬ ಪರಿವೆ ತಮಗಾರಿಗೂ ಹೊಳೆದಿರಲಿಲ್ಲವಲ್ಲ, ಈ ಬೆಂಗಾಡು ಸೀಮೆಯಲ್ಲಿ ತೆಂಗು, ಮಾವು, ನಿಂಬೆ ಮೊದಲಾದ ಫಲವೃಕ್ಷಗಳನ್ನು ಬೆಳಸುವುದೆಂತು ?—ಎಂಬುದಾಗಿ ಹಳ್ಳಿಯ ಭವಿಷ್ಯವನ್ನು ತನ್ನ ಬಾಲ್ಯ ಸ್ನೇಹಿತ ನರಹರಿಯ ಜೊತೆಯಲ್ಲಿ ಗೌಡ ಪ್ರಸ್ತಾಪಿಸಿ. ಕೊನೆಗೆ ಏನಾದರಾಗಲಿ, ತಮ್ಮ ಕೆರೆಯ ಕೆಳಗಣ ಗದ್ದೆಯಲ್ಲಿ ಏನಾದರೂ ಮಾಡಿ ತೋಟ ಮಾಡಿಸಬೇಕೆಂದು ನಿರ್ಧರಿಸಿದನು. ತನ್ನ ಹಳ್ಳಿಯ ಹಿತಕ್ಕಾಗಿ, ಪರೋಪಕಾರಕ್ಕಾಗಿ, ತನ್ನ ಜಮೀನನ್ನು ದಾನಮಾಡಿ, ಅದರಲ್ಲಿ ಹಳ್ಳಿಯವರೊಡಗೂಡಿ ಒಂದು ಬಾವಿಯನ್ನು ತೋಡಿಸಿ, ನಾಲ್ಕೈದು ಎಕರೆಯಷ್ಟು ಅಗಲವಾದ ತೋಟವನ್ನು ಮಾಡಿಸಿದನು. ಇಷ್ಟಾದರೂ, ತನ್ನ ಹಳ್ಳಿಯ ವಿಷಯವಾಗಿ ಯಾವಾಗಲೂ ಚಿಂತಿಸುವಂತಹ ವ್ಯಕ್ತಿ. ತೋಟವನ್ನು ಮಾಡಿಸುವ ಕಾರ್ಯದಲ್ಲಿ ಹಳ್ಳಿಯವರೆಲ್ಲ ಒಂದು ಸಂಸಾರಕ್ಕೆ ಸೇರಿದಂತೆ ಸಹಕರಿಸಿದ ಪ್ರಸಂಗ ನೆನೆದರೆ,

ಹಿಂದಿನ ಹಳ್ಳಿಯ ಜೀವನದ ಚಿತ್ರ ಕರುಬುವಂತಹದು. ತೋಟ ಮಾಡಿಸಿದ ಮೇಲೆ ಗೌಡನು ಹಳ್ಳಿಗೆ ಶ್ರೋತ್ರೀಯರಾದ ಶ್ರೇಷ್ಠ ಬ್ರಾಹ್ಮಣನನ್ನು ತಂದಿರಿಸಲು ಪ್ರಯತ್ನಮಾಡಿ ಸುಬ್ಬಾಭಟ್ಟನೆಂಬ ಬ್ರಾಹ್ಮಣನನ್ನು ಚಂದನಹಳ್ಳಿಗೆ ಕರೆಸಿ, ಆತನ ಸಂಸಾರಕ್ಕೆ ಬೇಕಾದ ಸೌಲಭ್ಯ ಒದಗಿಸಿಕೊಟ್ಟನು.

ಸುಬ್ಬಾಭಟ್ಟ ಅನ್ನ ಕೊಟ್ಟ ಮನೆಗೆ ಮಣ್ಣು ಹಾಕಲು ಹವಣಿಸುವ ವ್ಯಕ್ತಿ. ತನ್ನ ಹೆಂಡತಿಯು ನರಹರಿ ಮತ್ತು ಗೌಡರ ಮನೆಯವರ ಮಧ್ಯೆ ವಿರಸ ತಂದೊಡ್ಡಲು ಮಾಡಿದ ಪ್ರಯತ್ನದಲ್ಲಿ, ಗೌಡ ತನ್ನ ಮನೆಯ ಹತ್ತಿರ ಬಂದು ಮಾತನಾಡಿದ ದಿನದಿಂದ ನರಹರಿಯ ಮೇಲಿದ್ದ ಸಿಟ್ಟು ಗೌಡರ ಮನೆಯ ಕಡೆ ತಿರುಗಿ, ಆ ಮೂಲಕ ಹಳ್ಳಿಯನ್ನೇ ಏನಾದರೂ ಮಾಡಿ ಮುರಿಯಲು ಸಮಯ ಕಾಯುತ್ತಿದ್ದ. ಅದೇ ವೇಳೆಗೆ, ಊರಿನ ಪಂಚಾಯತರಿಗೆಲ್ಲಾ ವಿರುದ್ಧ ಮಾತ ನಾಡಿ, ಬಹಿಷ್ಕಾರ ಹಾಕಿಸಿಕೊಂಡು, ತಿಪ್ಪಾರೆಡ್ಡಿಯನ್ನು ಕೂಡಿಕೊಂಡು ವ್ಯಾಜ್ಯ ದಲ್ಲಿ ಗೆದ್ದ ಚಂಡಾಲ ಕರಿಯಪ್ಪ ಊರಿಗೆ ಕಾಲಿಟ್ಟ. ಪುಂಡನಾದ ಇವನಿಗೆ ಹೆದರಿ ಇವನ ಸ್ನೇಹಿತರಾದ ಹಲವರಲ್ಲಿ ಸುಬ್ಬಾಭಟ್ಟನೇ ಇವನ ಅಂತರಂಗಸಚಿವ. ಗೌಡನ ಮನೆಯನ್ನು ಹೇಗೆ ಹಾಳುಮಾಡಬೇಕು ಎಂದು ಬೋಧಿಸುವ ಕಾರ್ಯದಲ್ಲಿ ಸುಬ್ಬಾಭಟ್ಟ ಕರಿಯಪ್ಪನಿಗೆ ಗುರುವಾದ. ಇವರ ಜೋಡಿ "ಚೋರ ಗುರುವಿಗೆ ಚಂಡಾಲ ಶಿಷ್ಯ" ಎಂಬಂತಾಯಿತು.

ಕರಿಯಪ್ಪ ಊರಿನ ತರುಣರನ್ನೆಲ್ಲಾ ಮನೆಗೆ ಕೂಡಿಕೊಂಡು ಇಸ್ಪೀಟು, ಧೂಮಪಾನ ಮುಂತಾದ ದುಷ್ಕೃತ್ಯಗಳನ್ನು ಕಲಿಸುವ ಪುಂಡನಾಯಕನಾದ. ಮಡ್ಡಿಲ್ಲದವರಿಗೆ ದುಡ್ಡು ಕೊಟ್ಟು, ಅವರು ಜಾಗ್ರತೆಯಾಗಿ "ಹಾಳಾಗುವ ಸನ್ಮಾರ್ಗ"ವನ್ನು ತೋರುವ ಮಾರ್ಗದರ್ಶಕನಾದ. ಅಂತಹ ತರುಣರಲ್ಲಿ ಶಿವನಂಜೇಗೌಡನ ಪ್ರೀತಿಯ, ಮುದ್ದಾದ ಕಿರಿಯ ಮಗ ರಾಮಯ್ಯನೂ ಒಬ್ಬ. ಸುಬ್ಬಾಭಟ್ಟ ಕರಿಯಪ್ಪರಿಬ್ಬರೂ ಸೇರಿ, ನೆಟ್ಟಗೆ ಬೆಳೆಯುತ್ತಿದ್ದ ಗಿಡವನ್ನು ಒಂದು ಕಡೆಗೆ ವಾಲಿಸಿ ಡೊಂಕು ಮಾಡುವಂತೆ, ರಾಮಯ್ಯನಿಗೆ ಹಲವಾರು ವಿಧವಾದ ಚಾಡಿಗಳನ್ನು ಹೇಳಿ ಅವನನ್ನು ಅವಿಭಕ್ತ ಕುಟುಂಬದಿಂದ ಬೇರೆ ಮಾಡಿಸಿದರು. ಗೌಡರ ಹೆಂಡತಿ, ಮುಗ್ಧ ಸ್ವಭಾವದ ಪುಟ್ಟತಾಯಮ್ಮ ಇದನ್ನು ಸಹಿಸ ಲಾರದೆ ಪ್ರಾಣ ನೀಗಿದಳು. ಗೌಡ ತನ್ನ ಮನೆಯನ್ನೇ ತೊರೆದುಬಿಟ್ಟ. ಅಲ್ಲಿಗೆ ಊರಿನ ದೊಡ್ಡ ತಲೆಗಳ ಗೌರವ, ಮಾತುಗಳಿಗೆ ಬೆಲೆಯೆಂಬುದು ನಿಂತಂತಾ ಯಿತು. ಒಂದು ಕುಟುಂಬ ಒಡೆದು, ಊರೇ ಒಡೆಯಿತು. ಹಿರಿಯ ತಲೆ ಕಣ್ಮರೆಯಾಗಿ 'ತಲಾತಟ್ಟೆ' ರಾಜ್ಯವಾಯಿತು.

ಚಿಕ್ಕಂದಿನಿಂದಲೂ ವ್ಯವಸಾಯದಲ್ಲಿ ನುರಿತ ಹನುಮಪ್ಪ, ಭರ್ಜರಿಯಾಗಿ ವ್ಯವಸಾಯ ಮಾಡುವುದನ್ನು ಕಲಿತಿದ್ದ. ಸೋಮಾರಿಯಾದ, ಪುಂಡನಾದ ರಾಮಯ್ಯ ಊರಿನ ಹಲವರನ್ನು ಗುಂಪು ಕಟ್ಟಿಕೊಂಡು ಹನುಮಪ್ಪನಿಗೆ ಕಿರುಕುಳ ಕೊಟ್ಟ. ಹೀಗೆ ಅಣ್ಣತಮ್ಮಂದಿರ ಜಗಳದಲ್ಲಿ ಹಳ್ಳಿ ಎರಡು ಪಾರ್ಟಿಯಾಗಿ, ಇಬ್ಬರೂ ಅನೇಕ ಸಾರಿ ಕೋರ್ಟು ಕಚೇರಿಗಳನ್ನು ಹತ್ತಿ, ತಮ್ಮಲ್ಲಿದ್ದ ಹಣ ವನ್ನೆಲ್ಲಾ ಕಳೆದುಕೊಂಡು ದರಿದ್ರರಾದರು. 'ಎರಡು ಕೋಣಗಳ ಜಗಳ ಒಂದು ಗಿಡಕ್ಕೆ ಮೃತ್ಯು'ವೆಂಬಂತೆ ಅಣ್ಣತಮ್ಮಂದಿರ ಜಗಳದಲ್ಲಿ ಊರು ಎರಡು ಪಾರ್ಟಿಯಾಗಿ, ಚಂದವಳ್ಳಿಯೆಂಬ ಗಿಡ ನಾಶವಾಗಲು ಅನುಕೂಲವಾಯಿತು. ಹಳ್ಳಿಯ ಜೀವನವೆಂಬ ನಂದನದ ಹಸಿರುಗಿಡ ಹೀಗೆ ಬಾಡಿದ ಚಿತ್ರ ದುಃಖಕರ. ಚಂದವಳ್ಳಿಯ ಅವನತಿಯ ಕತೆ ಎಲ್ಲ ಹಳ್ಳಿಗಳ ಬೀಳಿನ ಕತೆ.

ಹೀಗೆ ನಡೆಯುತ್ತಿದ್ದ ವ್ಯಾಜ್ಯಗಳ ನಡುವೆ, ಪರರ ಮಾತಿನಿಂದ ಮತ್ತು ಭಟ್ಟರ ಹೆಂಡತಿ ಜಲಜಾಕ್ಷಮ್ಮನ ಕುಯುಕ್ತಿಯಿಂದ, ರಾಮಯ್ಯನ ಹೆಂಡತಿಯಾದ ಲಕ್ಷ್ಮಿ ಹನುಮಪ್ಪನ ಮಗುವಿಗೆ ವಿಷ ಕೊಟ್ಟುಕೊಂದಳು. ಇದರಿಂದಾಗಿ, ಕ್ರೋಧಾ ವೇಶದಿಂದ ಅಂಧನಾದ, ದುಃಖಭರಿತನಾದ ಹನುಮಪ್ಪ ಲಕ್ಷ್ಮಿಯನ್ನು ಕೊಲ್ಲಲು ಹೋಗಿ, ಮುಂದೆ ಬಂದ ರಾಮಯ್ಯನನ್ನೇ ಕೊಂದನು. ಕೋರ್ಟಿನಲ್ಲಿ ತಾನು ಮಾಡಿದ್ದು ನಿಜವೆಂದು ಒಪ್ಪಿಕೊಂಡ ಹನುಮಪ್ಪನಿಗೆ ಜೀವಾವಧಿ ಶಿಕ್ಷೆಯಾಗಿ, ಅಲ್ಲೇ ಕೊರಗಿ ಸತ್ತ. ರಾಮಯ್ಯ ತಿಪ್ಪಾರೆಡ್ಡಿಯಲ್ಲಿ ಮಾಡಿದ್ದ ಸಾಲವನ್ನು ತೀರಿಸಿದ ಕರಿಯಪ್ಪ, ರಾಮಯ್ಯನ ಆಸ್ತಿಯನ್ನೂ ಲಕ್ಷ್ಮಿಯನ್ನೂ ತನ್ನ ಆಸ್ತಿ ಯಾಗಿ ಮಾಡಿಕೊಂಡ. ರಾಮಯ್ಯನಿಗೆ ಸೇರಿದ್ದ ತೋಟವೂ ಅವನದಾಯಿತು. ಕೆಲಕಾಲ ಹೊಲಸು ಬಾಳುವೆ ನಡೆಸಿದ ಲಕ್ಷ್ಮಿ ಸತ್ತುಹೋದಳು.

ಹೀಗಾಗಿ ಗೌಡನ ಮನೆ ಮತ್ತು ಗೌಡನ ಮಕ್ಕಳ ಕಡೆ ಸೇರಿಕೊಂಡ ಊರಿನ ಎರಡು ಪಾರ್ಟಿಗಳೂ ಅನ್ಯಾಯವಾಗಿ ನಾಶವಾಗಿ ಹಳ್ಳಿಯು ಅಧೋ ಗತಿಗೆ ಇಳಿಯಿತು. ಬಡಬಗ್ಗ ಯುವಕರಿಗೆಲ್ಲಾ ಸಾಲಕೊಟ್ಟು ಅವರ ಆಸ್ತಿಯನ್ನೆಲ್ಲಾ ತಮ್ಮ ಸ್ವಾಧೀನ ಮಾಡಿಕೊಳ್ಳುವ, ಹೀನ ಕರಿಯಪ್ಪನಂತಹ ಜನರೇ ಹೆಚ್ಚು. ಊರಿನ ಜನರೆಲ್ಲರೂ ಏಕಮನಸ್ಕರಾಗಿ, ಉದಾರಿಗಳಾಗಿ, ಸತ್ಯವಂತರಾಗಿ, ದುರ್ಮಾರ್ಗದ ಅನುಸರಣೆ ಬಿಟ್ಟು, ಊರಿನ ಹಿರಿಯರಿಗೆ ಗೌರವ ಕೊಟ್ಟು, ಸನ್ಮಾರ್ಗ ದಲ್ಲಿ ನಡೆಯುತ್ತಿದ್ದ ಸಜ್ಜನರನ್ನುಳ್ಳ ಹಳ್ಳಿ ಸುಬ್ಬಾಭಟ್ಟ ಮತ್ತು ಕರಿಯಪ್ಪರೆಂಬ ಎರಡೇ ಎರಡು ವಿಷಬೀಜಗಳಿಂದ ಹಾಳಾಯಿತು. ಸತ್ಯಕ್ಕೆ ಕಾಲವಲ್ಲವೆಂಬಂತೆ, ಸತ್ಯವಂತರು ಸತ್ಯದ ಹಾದಿಯನ್ನು ಹಿಡಿದುದರ ಪರಿಣಾಮವನ್ನು ಅವರ ಕಣ್ಣೆದುರಿ

ನಲ್ಲೇ ತೋರಿಸಿದ ದುರಂತ ಜೀವನ ಕಂಡುಬರುತ್ತದೆ 'ಚಂದವಳ್ಳಿಯ ತೋಟ' ದಲ್ಲಿ. ಆದರೆ, ಸತ್ಯನಂತರಲ್ಲದಿದ್ದರೂ, ಎಲುಬಿನಾಸೆಗೆ ತಿರುಗುವ ನಾಯಿಗಳಂತೆ ಹಣದಾಸೆಗೆ ಪುಂಡನಾಯಕರನ್ನು ಹಿಂಬಾಲಿಸುತ್ತ, ಯಾವ ಹೀನಕೃತ್ಯ ವನ್ನೆಸಗಲೂ ಹಿಂಜರಿಯದ ಪಾಪಿಗಳು ಕರಿಯಪ್ಪನಂತಹವರನ್ನು ಓಲಗಿಸುತ್ತಾರೆ; ತಾವೂ ನಾಶ ಹೊಂದುತ್ತಾರೆ. ಕರಿಯಪ್ಪನೇನೋ ಬದುಕಿಕೊಂಡ. ಎಂತಹ ಬದುಕು ? ಅವನನ್ನು ಕಂಡರೆ ಯಾರಿಗೂ ಗೌರವವಿಲ್ಲ. ಹಾಳೂರ ದೊರೆ.

ಈ ರೀತಿ, ಧರ್ಮ, ಸತ್ಯಗಳು ನೆಲಸಿ ಸುಭಿಕ್ಷವಾಗಿ ನಾಗರಿಕತೆಯ ಸೋಂಕಿಲ್ಲದೆ, ಕೋರ್ಟು ಕಚೇರಿಗಳನ್ನು ಹತ್ತದೆ, ಧರ್ಮದ ಪಥದಲ್ಲಿ ನಡೆಯು ತ್ತಿದ್ದ ಹಳ್ಳಿಗಳಲ್ಲಿ ಈಗ ಅಧರ್ಮ ಅಸತ್ಯ ಹೆಚ್ಚಿವೆ. ಅವು ಮತ್ತೆ ಮೊದಲಿನ ಸ್ಥಿತಿಗೆ ಬರಬಹುದು ; ಬರಬೇಕು. ಅಂತಹ ಸ್ಥಿತಿಯಲ್ಲಿರುವ, ನಂದನವಾಗಿದ್ದು ನರಕವಾಗಿರುವ ಹಳ್ಳಿಗಳನ್ನು ಮೊದಲಿನಂತೆ ಸುಭಿಕ್ಷಸ್ಥಿತಿಗೆ ತರುವಮಾರ್ಗವನ್ನು ಹುಡುಕುವುದು ಪ್ರತಿಯೊಬ್ಬರ ಮೇಲಿರುವ ಭಾರಿ ಹೊಣೆ. ಈ ಹೊಣೆ, "ಚಂದವಳ್ಳಿಯ ತೋಟ"ದಲ್ಲಿ ಬರುವಂತಹ ಹಳ್ಳಿಯ ದುರಂತ ಜೀವನ ಚಿತ್ರದ ನೋಟದಿಂದಲಾದರೂ ಮನವರಿಕೆಯಾದೀತು ; ಹಾಗೆ ಆಗಬೇಕೆಂಬುದು ಕಾದಂಬರಿಯ ಉದ್ದೇಶ.

ಒಟ್ಟಿನಲ್ಲಿ, ಹಳ್ಳಿಯ ಹಿಂದಿನ ವೈಭವ, ಅಲ್ಲಿ ಕಾಣಬರುತ್ತಿದ್ದ ಒಗ್ಗಟ್ಟು, ಜನರ ಸರಳ ಸುಂದರ ಜೀವನ, ಮೂಢನಂಬಿಕೆಗಳು, ಹಳ್ಳಿಯ ಅವನತಿಗೆ ಕಾರಣ ಗಳಾದ ದ್ವೇಷ ಮಾತ್ಸರ್ಯ ಅನೈಕ್ಯ ಕುತ್ಸಿತಗಳು—ಇವುಗಳ ಸಮಗ್ರ ಚಿತ್ರವಾಗಿದೆ 'ಚಂದವಳ್ಳಿಯ ತೋಟ.'

**—ಕೆ. ಎನ್. ನಿಂಗಯ್ಯ**
(Pu.C.,B.)

# ಭಾವವಿಸ್ತರಣ

## (Expension)

### ೧

### ದುಡ್ಡಿದ್ದವನೇ ದೊಡ್ಡಪ್ಪ

ನಮ್ಮ ಯಾವ ಕೆಲಸ ಕಾರ್ಯಗಳಿಗೂ ಹಣವೇ ಮುಖ್ಯ. ಅಂದರೆ ಹಣವನ್ನು ತಿನ್ನುತ್ತೇವೆಯೇ? ಕುಡಿಯುತ್ತೇವೆಯೇ? ಮೂಗಿನಿಂದ ಸೇವಿಸುತ್ತೇವೆಯೇ? ತಿನ್ನಲು ಅನ್ನವಿದೆ. ಕುಡಿಯಲು ನೀರಿದೆ. ಉಸಿರಾಡಲು ಗಾಳಿ ಇದೆ. ಹಣ ಏಕೆ ಬೇಕು? ಎನ್ನಬೇಡಿ.

ಈಗಿನ ಕಾಲದಲ್ಲಿ ಒಂದು ಹೊತ್ತಿನ ಊಟಕ್ಕೂ ಚೀಟಿ ಹಿಡಿದುಕೊಂಡು ಅಲೆಯಬೇಕು. ಒಂದು ಲೋಟ ನೀರು ಕುಡಿಯಲು ಅಲೆಯಬೇಕು. ಸಮಯ ಬಂದರೆ ಉಸಿರಾಡಲೂ ಕೃತಕ ಉಸಿರಾಟ ಪಡೆಯಬೇಕು. ಇವುಗಳಿಲ್ಲದೆ ಜೀವನ ನಡೆಸಲು ನಾವೇನು ಋಷಿಗಳೆ? ಆದ್ದರಿಂದ ಈ ನಮ್ಮ 'ಬೇಕು'ಗಳನ್ನು ಪೂರೈಸಬೇಕಾದರೆ ಹಣ ಬೇಕೇ ಬೇಕು.

ಜನಗಳ ದುರಾಚಾರ ಮತ್ತು ದುರ್ನಡತೆಯಿಂದ ವರ್ಷಕ್ಕೆ ಎರಡು ಮಳೆ ಒಂದು ಬೆಳೆ. ಈ ರೀತಿಯಲ್ಲಿರುವಾಗ ನಾವು ಕೊಂಡು ತಿನ್ನಬೇಕು.

ಹೊಡೆದಾಟ ಮಾಡಿ ಕೇಸನ್ನು ಗೆಲ್ಲಬೇಕಾದರೆ, ಒಂದು ಊರಿನಿಂದ ಬೇರೆಯ ಊರಿಗೆ ಪ್ರಯಾಣ ಮಾಡಬೇಕಾದರೆ, ನುದುವೆ ಮುಂಜಿ ಮಾಡಬೇಕಾದರೆ, ನಮ್ಮ ಸ್ವಾರ್ಥಗಳನ್ನು ಪೂರೈಸಿಕೊಳ್ಳಬೇಕಾದರೆ, ಒಂದು ಧರ್ಮದ ಕೆಲಸ ಮಾಡಬೇಕಾದರೆ, ಹಣ ಬೇಕೇ ಬೇಕು. ದೇವರಿಗೂ ಕೂಡ ಲಂಚವನ್ನು ಕೊಟ್ಟು ಒಲಿಸಿಕೊಳ್ಳುವ ಕಾಲ ಇದು. ಮನುಷ್ಯರನ್ನು ಕೇಳುವ ಹಾಗೆಯೇ ಇಲ್ಲ. "ಲಂಚಾಧಿಪತಿಗಳಾಗಿದ್ದು ಲಕ್ಷಾಧಿಪತಿಗಳಾಗುತ್ತಾರೆ." "ಬಡ್ಡಿಯನ್ನು ಪಡೆದು ಬಲ್ಲಿದರಾಗುತ್ತಾರೆ."

ಪ್ರಪಂಚ ವ್ಯವಹಾರಗಳು ಹೀಗಿರುವಾಗ ಹಣವು ಇಲ್ಲದಿದ್ದರೆ ಅಂತಹವರು ಇದ್ದರೂ ಸತ್ತಂತೆಯೇ ಸರಿ: ಅಂದರೆ, ಹಣವಿಲ್ಲದ ಹೆಣ. ತಿರಿದು ಬದುಕಿ

ದವರೆಲ್ಲಾ ಹಣದ ಸಹಾಯದಿಂದ ತಿವಿದು ಕೊಲ್ಲುವ ಶಕ್ತಿಯನ್ನು ಪಡೆದು ಕೊಂಡಿದ್ದಾರೆ.

ಯಾರೇ ಆಗಲಿ ಯಾವ ಒಂದು ದೇಶವೇ ಆಗಲಿ ಮುಂದೆ ಬರಬೇಕಾದರೆ, ಉನ್ನತಮಟ್ಟವನ್ನು ಮುಟ್ಟಬೇಕಾದರೆ, ಹಣ ಬೇಕೇ ಬೇಕು. ಆದ್ದರಿಂದ ಹಣ ಇದ್ದವನನ್ನೇ ಗುಣವಂತನೆಂದು ಹೊಗಳುತ್ತಾರೆ. ದುಡ್ಡಿಲ್ಲದಿದ್ದವನು ಗೊಡ್ಡು, ದುಡ್ಡಿದ್ದವನೇ ತಂದೆಗಿಂತ ದೊಡ್ಡವನು ಎಂದು ಹೇಳುತ್ತದೆ ಪ್ರಪಂಚ.

— ಟಿ. ಗೋವಿಂದಯ್ಯ
(Pu.C.,S.)

---

೨

## ಈಸಬೇಕು ಇದ್ದು ಜೈಸಬೇಕು

'ಈಸಬೇಕು ಇದ್ದು ಜೈಸಬೇಕು' ಎಂಬ ವಾಕ್ಯವನ್ನು ಪುರಂದರ ದಾಸರು ಹಾಡಿದ್ದಾರೆ. ಇದರ ಭಾವ ಏನೆಂದರೆ, ಎಲ್ಲವನ್ನೂ ಎದುರಿಸಿ ಬಾಳಬೇಕು ಎಂದು. ಪ್ರಪಂಚದಲ್ಲಿ ಕಷ್ಟ ಸುಖಗಳು ಯಾರಿಗೂ ತಪ್ಪಿದ್ದಲ್ಲ. ಹೇಗೆ ಬೆಳಕು ಮಾಯವಾಗಿ ರಾತ್ರಿ ಉಂಟಾಗುತ್ತದೆಯೋ, ಮತ್ತೆ ಹೇಗೆ ರಾತ್ರಿಯ ಕತ್ತಲು ಮಾಯವಾಗಿ ಬೆಳಕು ಉಂಟಾಗುತ್ತದೆಯೋ, ಅದೇ ರೀತಿ ಮನುಷ್ಯನ ಜೀವನದಲ್ಲಿಯೂ ಕಷ್ಟಸುಖಗಳು ಒಂದಾದ ಮೇಲೊಂದು ಬರುತ್ತವೆ. ಮನುಷ್ಯನ ಜೀವನ ಒಂದು ಯಂತ್ರದ ಗಾಲಿ. ಆ ಗಾಲಿ ತಿರುಗುತ್ತಿರುತ್ತದೆ. ಇಂದು ಕಷ್ಟ ಬಂದವನಿಗೆ ನಾಳೆ ಸುಖ ಬರಬಹುದು ; ಇಂದು ಸುಖವಿದ್ದವನಿಗೆ ನಾಳೆ ಕಷ್ಟ, ದುಃಖ ಬರಬಹುದು. ಸುಖ ದುಃಖಗಳು ಅಶಾಶ್ವತವಾದುವು. ಕಷ್ಟ ಬಂದಾಗ ಕುಗ್ಗಬಾರದು ; ಸುಖ ಬಂದಾಗ ಹಿಗ್ಗಬಾರದು. ಈ ಕಷ್ಟ ಸುಖಗಳ ಪ್ರವಾಹದಲ್ಲಿ ಈಜ ಮನುಷ್ಯನಾದವನು ದಡ ಸೇರಬೇಕು, ಮೋಕ್ಷ ವನ್ನು ಅಥವಾ ತನ್ನ ಗುರಿಯನ್ನು ಸಾಧಿಸಬೇಕು. ಅದು ಬಿಟ್ಟು, ಸುಖ ಬಂದಾಗ ಹಿಗ್ಗಿ ದುಃಖ ಬಂದಾಗ ಕೊರಗುವುದು ನ್ಯಾಯವಲ್ಲ. ಕಷ್ಟ ಬಂದಾಗ ಕೆಲವರು ಅದನ್ನು ತಾಳಲಾರದೆ ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ.

ಅದು ತಪ್ಪು. ಕಷ್ಟವೇ ಬರಲಿ ಸುಖವೇ ಬರಲಿ ಅದನ್ನು ಧೈರ್ಯದಿಂದ ಎದುರಿಸಿ ಗೆದ್ದು ತನ್ನ ಗುರಿಯನ್ನು ಮುಟ್ಟಬೇಕು ಎಂಬುದೇ ಈ ವಾಕ್ಯದ ಮುಖ್ಯ ಸಾರಾಂಶ.

ಉದಾಹರಣೆಗೆ–ಒಬ್ಬ ವಿದ್ಯಾರ್ಥಿ ಪರೀಕ್ಷೆಯಲ್ಲಿ ತೇರ್ಗಡೆಯಾಗಲಿಲ್ಲವೆಂದು ಅನಸಿಗೆ ತಿಳಿದರೆ, ಅವನು ಜೀವನದಲ್ಲಿ ಬೇಸರ ಹೊಂದಿ, ಆತ್ಮಹತ್ಯೆ ಮಾಡಿ ಕೊಳ್ಳುತ್ತಾನೆ. ಇದು ಈಗಿನ ಕಾಲದಲ್ಲಿ ಸಾಮಾನ್ಯವಾಗಿದೆ. ಇದು ಶುದ್ಧ ತಪ್ಪು. ಆತ ಆತ್ಮಹತ್ಯೆ ಮಾಡಿಕೊಂಡಾಕ್ಷಣಕ್ಕೆ ಆತ ತೇರ್ಗಡೆ ಆದ ಹಾಗೆ ಆಗಲಿಲ್ಲ. ಆತನು ಜೀವಿಸಿದ್ದರೆ ಮುಂದಿನ ವರ್ಷ ಉತ್ತಮ ತರಗತಿಯಲ್ಲಿಯೇ ತೇರ್ಗಡೆ ಆಗಬಹುದು. ಅದು ಬಿಟ್ಟು, ದೇವರು ಕೊಟ್ಟ ಪವಿತ್ರವಾದ ಪ್ರಾಣ ವನ್ನು ತಾನೇ ತೆಗೆದುಕೊಂಡರೆ ಏನನ್ನು ತಾನೆ ಸಾಧಿಸಿದಹಾಗಾಯಿತು? ಅದೂ ಅಲ್ಲದೆ, ಆತ್ಮಹತ್ಯೆ ಮಹಾ ಪಾಪವೆಂದು ಶಾಸ್ತ್ರಗಳು ಕೂಡ ಹೇಳುತ್ತವೆ. ಹೀಗೆ, ಇಲ್ಲಿ ಪ್ರಾಣವನ್ನು ಕಳೆದುಕೊಂಡುದೂ ಅಲ್ಲದೆ ಪರಲೋಕದ ಪಾಪದಲ್ಲಿ ಹೊಣೆಗೂ ಗುರಿಯಾಗಬೇಕಾಗುತ್ತದೆ.

ಕಷ್ಟ ಸುಖಗಳು ಮಾನವನಿಗೆ ಬರದೆ ಮರಗಳಿಗೆ ಬರಲು ಸಾಧ್ಯವೆ? ಅದು ಪ್ರತಿಯೊಬ್ಬನ ಬೆನ್ನ ಹಿಂದೆಯೂ ಕಟ್ಟಿಟ್ಟ ಬುತ್ತಿ. ಅದನ್ನು ತಪ್ಪಿಸಲು ಅಥವಾ ಅದರಿಂದ ತಪ್ಪಿಸಿಕೊಳ್ಳಲು ಭಗವಂತನಿಗೇ ಸಾಧ್ಯವಿಲ್ಲ. ಹೀಗಿರುವಾಗ ಸಾಮಾನ್ಯ ಮನುಷ್ಯರ ಪಾಡೇನು?

ಕಷ್ಟವೇ ಬರಲಿ ಸುಖವೇ ಬರಲಿ ಸಂಸಾರವೆಂಬ ಸಾಗರದಲ್ಲಿ ಈಜಿ ತೇಲ ಬೇಕು; ಗುರಿಯನ್ನು ಮುಟ್ಟಬೇಕು. ಇದೇ ಪುರಂದರದಾಸರು ಹಾಡಿರುವ ಈ ಅಮೃತವಾಕ್ಯದ ಭಾವ.

—ರಂಗರಾಜು
(Pu.C.,P.)

---

೩

## ಕತ್ತಿಗಿಂತ ಲೇಖನಿಯೇ ಪ್ರಖರ

ಲೇಖನಿಯು ಕತ್ತಿಗಿಂತ ಬಹಳ ಪ್ರಬಲವಾಗಿದೆ. ಕತ್ತಿಯಿಂದ ಸ್ವಲ್ಪ ಕೆಡುಕಾದರೆ ಲೇಖನಿಯಿಂದ ಪ್ರಪಂಚವೇ ಕೆಡಬಹುದು. ಒಂದೆರಡು ಅಕ್ಷರ

ಗಳಿಂದ ಒಬ್ಬೊಬ್ಬರ ಕುಲವೇ ನಾಶವಾಗುತ್ತದೆ. ಅಷ್ಟೇಕೆ, ರಾಷ್ಟ್ರಗಳೇ ನಾಶವಾಗುತ್ತವೆ. ಮತಗಳು ಬದಲಾಯಿಸುತ್ತವೆ. ಜೀವನ ರೀತಿ ರೂಪುಗೊಳ್ಳಬಹುದು, ಅಥವಾ ಅಂದೇ ನಾಶವಾಗಬಹುದು. ಕೈಲಾಗದವರು, ಕತ್ತಿ ಹಿಡಿಯಲಾಗದವರು, ಅದಕ್ಕಿಂತಲೂ ಪ್ರಬಲವಾದ ಲೇಖನಿಯನ್ನು ಉಪಯೋಗಿಸುವರು. ಕಥೆಕಾದಂಬರಿಗಳಿಂದ ಎಷ್ಟೋ ಜನರ ಉದ್ಧಾರವೂ ಹಾಗೆಯೇ ಎಷ್ಟೋ ಜನರ ನಾಶವೂ ಆಗಿವೆ. ಲೇಖನಿಯಿಂದ ರಾಷ್ಟ್ರಗಳೆಲ್ಲ ಪರಿವರ್ತನವಾದವು. ಮಹಾತ್ಮರ ಎರಡು ವಚನಗಳು ದೇಶವನ್ನೇ ಉದ್ಧರಿಸಬಲ್ಲುದು. ಲೇಖನಿಯಿಂದ ಹಿಂದಿನ ಎಷ್ಟೋ ಜನಾಂಗಗಳ ರೂಪ, ವೈಭವ, ಗುಣಗಳು ತಿಳಿಯುತ್ತಿದೆ. ಅದೇ ಲೇಖನಿಯಿಂದ ಮುಂದಿನವರಿಗೆ ನಮ್ಮ ವಿಷಯವು ತಿಳಿಯುತ್ತವೆ. ಲೇಖನಿಯ ಸಾಮರ್ಥ್ಯವನ್ನು ತಗ್ಗಿಸುವುದು ಯಾರಿಂದಲೂ ಸಾಧ್ಯವಿಲ್ಲ. ಅದರಿಂದ ಏನು ಬೇಕಾದರೂ ಮಾಡಬಹುದು. ದಿನವೂ ಕೆಟ್ಟದ್ದನ್ನೇ ಬರೆಯುತ್ತಿದ್ದವನು ಅದರಲ್ಲಿಯೇ ಪ್ರಬಲನಾಗುವನು. ಈ ಶಕ್ತಿಗೆ ಸಮ ಮತ್ತೊಂದಿಲ್ಲ.

ಲೇಖನಿಯು ದಿನೇ ದಿನೇ ಕಮ್ಯೂನಿಸ್ಟ್ ಪಾರ್ಟಿಯನ್ನು ಕಾಂಗ್ರೆಸ್ ಪಾರ್ಟಿಯನ್ನಾಗಿ ಮಾಡಬಹುದು. ಈ ಶಕ್ತಿ ಕತ್ತಿಗಿಲ್ಲ. ಪ್ರಯತ್ನಪಟ್ಟಲ್ಲಿ ಒಬ್ಬರನ್ನು ಕೊಲ್ಲುವ ಕತ್ತಿಗೆ ಪ್ರಪಂಚವನ್ನು ಆಕರ್ಷಿಸುವ ಶಕ್ತಿಯಿಲ್ಲ. ಪ್ರಬುದ್ಧನ ಲೇಖನಿಯಿಂದ ಕತ್ತಿ ಉಪಯೋಗಿಸುವವನ (ಕೊಲೆಗಡುಕ) ಮನಸ್ಸು ಕೂಡ ಬದಲಾಗಿ ಆತ ಒಳ್ಳೆಯವನಾದಾನು.

ಲೇಖನಿಯು ಲೇಖಕನ ಬುದ್ಧಿಬಲವನ್ನೂ ಅನುಭವವನ್ನೂ ತರುವುದಾದರೂ, ಕೇವಲ ಭುಜಬಲವನ್ನು ತೋರುವ ಕತ್ತಿಗಿಂತ ಹೆಚ್ಚು ಬೆಲೆಯುಳ್ಳದ್ದು. ಕತ್ತಿಯಿಂದ ಒಂದು ರಾಜ್ಯದ ಮನ್ನಣೆಯನ್ನು ಪಡೆಯಬಹುದಾದರೆ, ಲೇಖನಿಯಿಂದ ಪ್ರಪಂಚದ ಮನ್ನಣೆಯನ್ನು ಇಂದಿಗೂ ಮತ್ತು ನಾಳೆಗೂ ಪಡೆಯಬಹುದು. ಅಂತೂ ಲೇಖನಿಯು ಮಾನವನ ಜೀವನದಲ್ಲಿ ಕತ್ತಿಗಿಂತ ಪ್ರಬಲವಾದುದು ; ಆದ್ದರಿಂದ ಹೆಚ್ಚು ಹರಿತವಾದುದು.

[ವಿದ್ಯಾರ್ಥಿ ತನ್ನ ಹೆಸರನ್ನು ಬರೆದು ಕಳಿಸಿಲ್ಲ. —ಸಂ.]

೪

## ಪಾಲಿಗೆ ಬಂದದ್ದು ಪಂಚಾಮೃತ

ನನ್ನ ಇಪ್ಪತ್ತೆಂಟನೆಯ ವಯಸ್ಸಿನಲ್ಲಿ ನಾನು ಎಂ.ಎಸ್‌ಸಿ.ಗೆ ಓದುತ್ತಿದ್ದೆನು. ಆಗಲೇ ನನ್ನ ಭಾವಿ ಮಾವಂದಿರುಗಳು ನನ್ನ ಲಗ್ನದ ವಿಚಾರವಾಗಿ ನನ್ನ ತಂದೆಯನ್ನು ವಿಚಾರಿಸುತ್ತಿದ್ದರು. ಲಕ್ಷಾಧೀಶ್ವರರಿಂದ ಸಾಧಾರಣ ಕುಟುಂಬದ ವರೆಗೂ ನನ್ನನ್ನು ತಮ್ಮ ಅಳಿಯನನ್ನಾಗಿ ಸ್ವೀಕರಿಸಲು ಹಾತೊರೆಯುತ್ತಿದ್ದರು. ನಾನು ನನ್ನ ಮನಸ್ಸಿನಲ್ಲಿ ನನ್ನ ಪಾಲಿಗೆ ಬರುವ ಹುಡುಗಿಯ ರೂಪವನ್ನು ಕಲ್ಪಿಸಿಕೊಂಡು ಮುಂಡಿಗೆಯನ್ನು ಸವಿಯುತ್ತಿದ್ದೆನು. ಕಡೆಗೂ ನನ್ನ ತಂದೆಯವರು ಒಂದು ಸಾಧಾರಣ ಕುಟುಂಬದಿಂದ ಒಂದು ಹುಡುಗಿಯನ್ನು ತಂದು ಗಂಟುಹಾಕಿಬಿಟ್ಟರು. ಅಯ್ಯೋ....ಅವಳ ರೂಪ !....ಸೃಷ್ಟಿಸಿದ ಬ್ರಹ್ಮನಿಗೇ ಪ್ರೀತಿ ! ಅವಳ ಬಣ್ಣ 'ಕಾಫೀ ಡಿಕಾಕ್ಷನ್' ಬಣ್ಣವನ್ನು ಮೀರಿಸುತ್ತಿತ್ತು. ಅವಳ ಮೂಗೋ, ಸಿವುಗೇ ಪ್ರೀತಿ, ಕೊಕ್ಕರೆಯ ಮೂಗಿಗಿಂತ ಸ್ವಲ್ಪ ಚಿಕ್ಕದು ! ಕಣ್ಣು ಲಾರಿಯ 'ಹೆಡ್‌ಲೈಟ್'ನಂತೆ ಇತ್ತು. ಛೆ....ಛೆ! ಇನ್ನು ಅವಳನ್ನು ವರ್ಣಿಸಲಾರೆ. ನಾನು ಇಂಥಾ ಸುಂದರವಾದ ಹುಡುಗಿಯನ್ನು ಮದುವೆಯಾಗಲಾರೆನೆಂದು ಎಷ್ಟು ಹೇಳಿದರೂ ನನ್ನ ತಂದೆತಾಯಿಯವರ ಬಲವಂತಕ್ಕೋಸ್ಕರ ಮದುವೆಮಾಡಿಕೊಳ್ಳಬೇಕಾಯಿತು.

ನನ್ನ ತಂದೆಯವರಿಗೆ ನನ್ನ ಮಾವಂದಿರು ಬಾಲ್ಯದಿಂದಲೂ ಸ್ನೇಹಿತರಾದ್ದರಿಂದಲೇ ನನ್ನ ಮತ್ತು ಅವಳ ಬಾಂಧವ್ಯವು ಕೂಡಿಬಂತು. ಆದರೆ. ನೀವು ಏನೇ ಹೇಳಿ, ನನಗೆ ಮಾತ್ರ ಅವಳ ಹಾವಿನಂಥಾ ಜಡೆಯ ಮೇಲೆ ಬಹಳ ಮೋಹವಿತ್ತು. ಅದನ್ನು ನಾನು ಬಹಳ 'ಕಯಾಲಿ' ಮಾಡುತ್ತಿದ್ದೆ. ಕಡೆಗೆ, "ಬಣ್ಣದಲ್ಲೇನಿದೆ ಬೆಡಗು, ಬಾಳಿನಲ್ಲಿರುವುದು ಸೊಬಗು" ಎನ್ನುವ ತತ್ವದಿಂದ ನನ್ನ ಮನವನ್ನು ಸಮಾಧಾನಪಡಿಸಿದೆ.

ನಾನು ಅವಳನ್ನು ವಿವಾಹವಾದನಂತರ ನನ್ನ ಅದೃಷ್ಟವೆಲ್ಲವೂ ತಿರುಗಿತು. ನನ್ನ ಎಂ.ಎಸ್‌ಸಿ. ಪರೀಕ್ಷೆಯ ಫಲಿತಾಂಶವನ್ನು ನೋಡುವಾಗ ಅದರಲ್ಲಿ ನಾನು ಮೊದಲನೆಯ ಸ್ಥಾನವನ್ನು ಪಡೆದಿದ್ದೆ. ತಕ್ಷಣವೇ ಒಂದು ಭಾರೀ ಸಂಬಳ ಬರುವ ಕೆಲಸ ಸಿಕ್ಕಿತು. ಈಗ ನನಗೆ ಎರಡು ಮಕ್ಕಳು. ನನ್ನ ಮಗ H. A. L. ನಲ್ಲಿ ಒಬ್ಬ ಆಫೀಸರ್ ಆಗಿದ್ದಾನೆ. ಮಗಳಿಗೆ ಮದುವೆಯ ವಯಸ್ಸು. ನಾನೇನೋ ಅಳಿಯಂದಿರನ್ನು ಹುಡುಕಿಕೊಂಡು ಹೋಗಬೇಕಾಗಿಲ್ಲ. ಅವರ

ತಂದೆತಾಯಿಗಳೇ ನನ್ನನ್ನು ಪೀಡಿಸುತ್ತಿದ್ದಾರೆ. ನನ್ನ ಮಗಳು ಸ್ಫುರದ್ರೂಪಿ, ತಾಯಿಯಂತಲ್ಲ. ಆಗ ತೂಕಡಿಸುತ್ತಿದ್ದ ಬ್ರಹ್ಮ ಈಗ ಎಚ್ಚತ್ತಿದ್ದ ನನ್ನ ಪಾಲಿಗೆ. ಜೊತೆಗೆ, ಮನೆಯ ಕೆಲಸಗಳನ್ನು ಅಚ್ಚುಕಟ್ಟಾಗಿ ಮಾಡುತ್ತಾಳೆ.

ಈಗ ನನಗೆ ಎನ್ನಿಸುತ್ತದೆ, ನನ್ನ ಪಾಲಿಗೆ ಬಂದ ಪಂಚಾಮೃತವು ಬಣ್ಣದಲ್ಲಿ ಚೆನ್ನಾಗಿಲ್ಲದಿದ್ದರೂ ರುಚಿಯಲ್ಲಿ ಯಾವುದಕ್ಕೂ ಕಡಮೆಯಿಲ್ಲ. ನನ್ನ ಪಾಲಿಗೆ ಬಂದದ್ದು ನಿಜವಾಗಿಯೂ ಪಂಚಾಮೃತವೇ ಆಗಿದೆ.

ನೀವೂ ಸಹ ನಿಮ್ಮ ಪಾಲಿಗೆ ಬಂದದ್ದನ್ನು ತಿರಸ್ಕರಿಸದೆ ಸ್ವೀಕರಿಸಿದರೆ ಅದು ಪಂಚಾಮೃತವಾಗಿ ಮಾರ್ಪಾಡಾಗುವುದರಲ್ಲಿ ನನಗೆ ಸಂದೇಹವೇನೂ ಇಲ್ಲ.

**—ಎಲ್. ವೆಂಕಟೇಶ್ ಪ್ರಸಾದ್**
(Pu.C.,K.)

---

ಙ

## ನಾನು ಮೆಚ್ಚಿದ ನಾಟಕ

ನಾನು ಕಳೆದ ದಸರಾ ಹಬ್ಬದ ರಜೆಯಲ್ಲಿ ನನ್ನ ಹುಟ್ಟೂರಾದ ವೀರರಾಜಪೇಟೆಗೆ ಹೋಗಿದ್ದೆನು. ಅದೇ ಸಮಯದಲ್ಲಿ ಹಬ್ಬದ ಪ್ರಯುಕ್ತವಾಗಿ ಮಂಗಳೂರಿನ ನಾಟಕ ಕಂಪೆನಿಯವರು, ನಮ್ಮ ಪುರಭವನದಲ್ಲಿ "ಟಿಪ್ಪು ಸುಲ್ತಾನ್" ಎಂಬ ನಾಟಕವನ್ನು ಪ್ರದರ್ಶಿಸುತ್ತಿದ್ದರು. ನಾನು ನಾಟಕವನ್ನು ನೋಡಬೇಕೆಂದು ಇಚ್ಛಿಸಿ ಹಲವಾರು ಪ್ರೇಕ್ಷಕರ ಜತೆಗೆ ನಾನೂ ಒಬ್ಬನಾಗಿ ಕುಳಿತೆ.

ನಾಟಕವು ಪ್ರಾರಂಭವಾಯಿತು. ನಾಟಕದ ಮುಖ್ಯ ಪಾತ್ರಗಳು: ಟಿಪ್ಪು ಸುಲ್ತಾನ್; ಮೀರ್‌ಸಾಹೇಬ್, ಮಹಾರಾಣಿ, ಕಾರ್ನವಾಲಿಸ್ ದೊರೆ, ಇತರರು. ನಾಟಕದಲ್ಲಿ ನನಗೆ ಬಹುಮಟ್ಟಿಗೆ ಆಕರ್ಷಿಸಿದ ಪಾತ್ರಗಳೆಂದರೆ, ಕಾರ್ನ್‌ವಾಲಿಸ್ ದೊರೆ, ಮೀರ್‌ಸಾಹೇಬ್, ಟಿಪ್ಪು ಸುಲ್ತಾನ್. ನಾಟಕದಲ್ಲಿ ಪಾತ್ರವಹಿಸಿದ್ದ ಮೀರ್‌ಸಾಹೇಬನು ನಿಜವಾಗಿಯೂ ಟಿಪ್ಪುವಿನ ಕಾಲದವನೋ ಎನ್ನುವಂತಿದ್ದನು. ನಾನು ಆಲೋಚನಾಮಗ್ನನಾದೆ. ಇಂತಹ ಹಲವಾರು

ಮಿರ್‌ಸಾಹೇಬರಿಂದಾಗಿ ನಮ್ಮ ಇಡೀ ಭಾರತ ದೇಶವು, ಪರದೇಶೀಯರ ದಾಸ್ಯಕ್ಕೊಳಗಾಗಬೇಕಾಯಿತಲ್ಲ ಎಂದು. ನಾಟಕದ ಮಿರ್‌ಸಾಹೇಬ್‌ನಾದರೋ ತಾನೇ ರಾಜನಾಗಬೇಕೆಂದೂ, ಟಿಪ್ಪುವಿನ ದಳಪತಿಯ ಹೆಂಡತಿಯನ್ನು ತಾನೇ 'ನಿಕಾ' ಮಾಡಿಕೊಳ್ಳಬೇಕೆಂದೂ ಮಾಡಿದ ಕುತಂತ್ರ ಹೇಳಲಸದಳ. ಅಂತೆಯೇ ಅವನು ಬ್ರಿಟಿಷರ ಕೈಗೆ ಸಿಕ್ಕಿಬೀಳುವಾಗ ಮಾಡುವ ರೋದನವು ವರ್ಣಿಸಲಸದಳ. ಅಂತೂ ಅವನ ಪಾತ್ರ ಪ್ರೇಕ್ಷಣೀಯವಾಗಿತ್ತು, ನನಗೂ ಮತ್ತು ನನ್ನ ಸ್ನೇಹಿತರಿಗೆ. ಕಾರಣ ಆತನು ತುಂಬಾ ಹಾಸ್ಯವಿನೋದ ಮಾಡುತ್ತಾ, ಪ್ರೇಕ್ಷಕರಿಗೆ ಆನಂದವಾಗುವಂತೆ ಮಾಡಿದ.

ಟಿಪ್ಪು ಸುಲ್ತಾನ್ ಪಾತ್ರ : ಈತನಾದರೋ ತಾನು ಮುಸ್ಲಿಂ ಜಾತಿಯವನಾಗಿದ್ದರೂ ಸಹ ಹಿಂದುಗಳನ್ನು ತುಂಬಾ ಪ್ರೀತಿಯಿಂದ ಪಾಲಿಸುತ್ತಾನೆ. ಅವನು ತಾನು ರಾಜನೆಂಬುದನ್ನು ಮರೆತು, ಮೈಸೂರಿನ ಮಹಾರಾಣಿಗೆ ಶಿರ ಬಾಗಿಸುತ್ತಾನೆ. ಇಂತಹ ನಮ್ರ ಸೇವಕನಾಗಿ ವರ್ತಿಸಿದ ರಾಜರು ನಮ್ಮ ದೇಶದ ಚರಿತ್ರೆಯಲ್ಲೇ ವಿರಳರು. ಕಡೆಗೂ ತನ್ನ ದೇಶವನ್ನು ಕಾಪಾಡುವುದಕ್ಕಾಗಿ ತನ್ನ ಇಬ್ಬರು ಮಕ್ಕಳನ್ನು ಇಂಗ್ಲೀಷರಿಗೆ ಕೊಟ್ಟುಬಿಟ್ಟನು. ಅಷ್ಟೇ ಅಲ್ಲ, ತನ್ನ ರಾಜ್ಯದ ಹಲವು ಭಾಗಗಳನ್ನು ಆಂಗ್ಲರಿಗೆ ಕೊಟ್ಟುಬಿಟ್ಟನು. ತಾನು ಜಾತಿಯಲ್ಲಿ ಮುಸ್ಲಿಮನಾದರೂ ಹಿಂದುಗಳ ದೇವರಾದ ಶ್ರೀರಂಗನನ್ನು ಎಷ್ಟು ಭಕ್ತಿಯಿಂದ ಪೂಜಿಸುತ್ತಾನೆ! ಟಿಪ್ಪುವಿನ ಪಾತ್ರ ವಹಿಸಿದ್ದವರು ಎಲ್ಲಾ ಘಟನೆಗಳನ್ನೂ ತಕ್ಕಮಟ್ಟಿಗೆ ಅಭಿನಯಿಸಿದರು. ಆ ದಿನ ನನಗೆ ತೀರಾ ಟಿಪ್ಪುವಿನ ಯೋಚನೆ. ಆ ಮಹಾವೀರನ ಗುಣಗಾನ ಮಾಡುವುದೇ ಆಗಿತ್ತು. ಅಂತಹ ಕೇವಲ ಹತ್ತು ರಾಜರು ಒಂದಾಗಿದ್ದಿದ್ದರೆ, ನಮಗೆ ಈ ಬಡತನದ ದಾಸ್ಯ ಬರಬೇಕಾಗಿತ್ತೆ ಎಂದು ನಾನು ಟಿಪ್ಪುವನ್ನು ಸ್ಮರಿಸಿಕೊಂಡೆನು.

ಲಾರ್ಡ್ ಕಾರ್ನ್‌ವಾಲಿಸ್ ಪಾತ್ರವಹಿಸಿದ್ದವನು ಸಂಸ್ಥೆಯ ಮಾಲೀಕನೇ ಆಗಿದ್ದನು. ಅವನು ತನ್ನ ಪಾತ್ರವನ್ನು ಪ್ರೇಕ್ಷಣೀಯವಾಗುವಂತೆ ಅಭಿನಯಿಸಿದ್ದನು. ಅವನ ಕ್ರೂರಾತ್ಮದ ದರ್ಶನವು ಟಿಪ್ಪುವಿನ ಮಕ್ಕಳನ್ನು ಹತಮಾಡುವ ಸಮಯದಲ್ಲಿ ತಿಳಿಯುವುದು. ತನ್ನ ಕುತಂತ್ರದಿಂದ ಟಿಪ್ಪುವಿನ ರಾಜ್ಯವನ್ನು ವಶಪಡಿಸಿಕೊಂಡನು. ಟಿಪ್ಪು ಪಾತ್ರವನ್ನು ಧರಿಸಿದ್ದವನು ಈ ದೃಶ್ಯಗಳನ್ನು ಬಹಳ ಚೆನ್ನಾಗಿ ಅಭಿನಯಿಸಿದ್ದನು. ಆದರೂ ಕೊನೆಯಲ್ಲಿ ಕೆಲವು ದೃಶ್ಯಗಳನ್ನು ಚೆನ್ನಾಗಿ ಅಭಿನಯಿಸಿರಲಿಲ್ಲ. ಅಂತೂ ಕಾರ್ನ್‌ವಾಲಿಸ್ ದೊರೆಯಂತಹ ಹಲವು

ದೊರೆಗಳಿಂದ ನಮ್ಮ ಭರತಖಂಡವೇ ದಾಸ್ಯಕ್ಕೊಳಗಾಗಬೇಕಾಯಿತಲ್ಲಾ ಎಂದು ನನ್ನ ಮನಸ್ಸು ತಳಮಳಗೊಂಡಿತು.

ಅಂತೂ ಟಿಪ್ಪು ಸುಲ್ತಾನರಂಥ ಸಾವಿರಾರು ದೇಶಭಕ್ತರನ್ನು ಇನ್ನಾದರೂ ಭಾರತಾಂಬೆ ಪಡೆಯಲಿ ಎಂದು ಭಾರತಾಂಬೆಗೆ ಧನ್ಯವಾದಗಳನ್ನರ್ಪಿಸಿ, ಮನೆಗೆ ತೆರಳಿದೆನು.

—ಎನ್. ಗೋಪಾಲಕೃಷ್ಣ ಕಾಮತ್
(Pu.C.,P.)

---

೬

## ಕುಂಬಾರನಿಗೆ ವರುಷ ದೊಣ್ಣೆಗೆ ನಿಮಿಷ

ಪ್ರಪಂಚದ ವಸ್ತುಗಳನ್ನು ದೇವರು ಸೃಷ್ಟಿಸಿದ್ದು ಮತ್ತು ಮಾನವ ಸೃಷ್ಟಿಸಿದ್ದು ಎಂದು ಎರಡು ಭಾಗಗಳನ್ನಾಗಿ ಮಾಡಬಹುದು. ಯಾವ ವಸ್ತುವನ್ನೇ ಆಗಲಿ ಸೃಷ್ಟಿಸುವುದು ಬಹಳ ಕಷ್ಟ; ಆದರೆ ನಾಶಮಾಡುವುದು ಬಹಳ ಸುಲಭ. ಒಂದು ಸುಂದರವಾದ ವಿಗ್ರಹವನ್ನು ಸೃಷ್ಟಿಮಾಡುವುದಕ್ಕೆ ಶಿಲ್ಪಿ ಅನೇಕ ವರುಷ ಕಷ್ಟಪಡಬೇಕು. ಆದರೆ ಅದನ್ನು ನಾಶಮಾಡುವುದಕ್ಕೆ ಒಂದೇ ನಿಮಿಷ ಸಾಕು. ಒಂದು ವಿಗ್ರಹವನ್ನು ಸೃಷ್ಟಿಸುವಾಗ ಶಿಲ್ಪಿ ಅನೇಕ ಸಾಮಗ್ರಿ ಸಲಕರಣೆಗಳನ್ನು ಉಪಯೋಗಿಸುತ್ತಾನೆ; ಆದರೆ ಅದನ್ನು ನಾಶಮಾಡಲಿಕ್ಕೆ ಒಂದು ದೊಣ್ಣೆ ಸಾಕು! ಭಾರತದಲ್ಲಿ ಹಿಂದೆ ನಮ್ಮ ಶಿಲ್ಪಿಗಳು ಬಹಳ ವರ್ಷಕಾಲ ದುಡಿದು ದೇಶದಲ್ಲಿ ಶಿಲ್ಪವೈಭವದ ದೇವಸ್ಥಾನಗಳನ್ನು ಹೆಚ್ಚಿಸಿದ್ದರು. ಆದರೆ ಅವನ್ನು ಘಸ್ನೀ ಮಹಮುದ್ ಮತ್ತು ಘೋರಿ ಮಹಮುದರು ದಂಡೆತ್ತಿ ಬಂದಾಗ ಕೇವಲ ಕೆಲವೇ ದಿವಸಗಳಲ್ಲಿ ನಾಶಪಡಿಸಿದರು.

ಒಂದು ಪೀತಾಂಬರವನ್ನು ನೇಯುವುದಕ್ಕೆ ಎಷ್ಟೋ ದಿವಸಗಳು ಬೇಕಾಗುತ್ತವೆ; ಮತ್ತು ಬಹಳ ಕಷ್ಟಪಡಬೇಕಾಗುತ್ತದೆ. ಆದರೆ ಅದನ್ನು ನಾಶಮಾಡುವುದು ಬಹಳ ಸುಲಭ; ಒಂದು ಕಿಡಿ ಸಾಕು,

ಒಂದು ಪದಾರ್ಥವನ್ನು ಸೃಷ್ಟಿಸುವುದು ಎಷ್ಟು ಕಷ್ಟವೋ, ಅದನ್ನು ನಾಶಪಡಿಸುವುದು ಅಷ್ಟೇ ಸುಲಭ; ಸೃಷ್ಟಿಗೆ ದೀರ್ಘಕಾಲ ಬೇಕು, ನಾಶ ಕಾರ್ಯಕ್ಕೆ ನಿಮಿಷವೇ ಸಾಕು.

—ಕೆ. ಲೆಚ್. ರಾಮಚಂದ್ರಪ್ಪ
(Pu.C.,D.)

---

೭

## ಊರೂರು ತಿರುಗಿನೋಡಿದರೆ ನಮ್ಮೂರೆ ವಾಸಿ

ಇದು ಲೋಕರೂಢಿಯಾದ ಮಾತಾಗಿದೆ. ಪ್ರತಿಯೊಬ್ಬ ಮನುಷ್ಯನೂ ಪ್ರಪಂಚದಲ್ಲಿ ಹುಟ್ಟಿದ ಮೇಲೆ ತಾನು ಹುಟ್ಟಿದ ಸ್ಥಳವನ್ನು ಅಥವಾ ತನ್ನ ತಂದೆ ತಾಯಿಯನ್ನ, ಅಕ್ಕ ತಂಗಿಯರನ್ನ, ಅಣ್ಣ ತಮ್ಮಂದಿರನ್ನ ಪ್ರೀತಿಸುವುದು ಸಹಜ. ಸುಮಾರು ಒಂದು ಅಥವಾ ಎರಡು ವರ್ಷದ ಮಕ್ಕಳು ಮೊದಲು ತಂದೆ-ತಾಯಿ ಅಣ್ಣ-ತಮ್ಮಂದಿರನ್ನು ಪ್ರೀತಿಸಲು ಮೊದಲುಮಾಡುತ್ತವೆ. ಅದೇ ರೀತಿ, ಕಾಲಕ್ರಮದಲ್ಲಿ ತನ್ನ ಮನೆ ತನ್ನ ಕೇರಿ ತನ್ನ ಊರು ಎಂಬ ಹೆಮ್ಮೆಯೂ ಬರುತ್ತದೆ. ಆದರೆ ದೇಶದ ಮೇಲೆ ಪ್ರೀತಿ ಇಲ್ಲವೆಂದಲ್ಲ. ಪ್ರೀತಿ ಇದ್ದರೂ ಸಹ ತಾನು ಹುಟ್ಟಿ-ಬೆಳೆದ ಊರು ಅವನಿಗೆ ಮನೋಹರವಾಗಿ ಆನಂದ ದಾಯಕವಾಗಿ ಕಾಣುತ್ತದೆ. ಅವನು ಆ ಊರಿನ ನಂಟರಿಷ್ಟರು, ನೆರೆಹೊರೆ, ಪ್ರಕೃತಿಸೌಂದರ್ಯ ಇವುಗಳೊಂದಿಗೆ ಹೊಂದಿಕೊಂಡಿರುತ್ತಾನೆ. ಆದರೆ ವಯಸ್ಸಾಗುತ್ತಾ ಆ ಊರಿನಲ್ಲಿರಲು ಅವನಿಗೆ ಸ್ವಲ್ಪಮಟ್ಟಿಗೆ ಬೇಸರವಾಗಿ ಕಾಣುತ್ತದೆ, ಈ ವಿಜ್ಞಾನ ಯುಗದ ಕಾಲದಲ್ಲಿ. ಆಗ ಅವನು ಆ ಊರನ್ನು ಬಿಟ್ಟು, ಮತ್ತು ತಂದೆತಾಯಿಯನ್ನು ಬಿಟ್ಟು, ಬೇರೆ ಊರು ದೇಶ ನೋಡಲು ಹೋಗುತ್ತಾನೆ. ಅಲ್ಲಿ ನೆಲಸಲೂಬಹುದು. ಕೆಲವು ಕಾಲ ಮಾತ್ರ ಅಲ್ಲಿ ಒಂದು ರೀತಿಯ ಆನಂದದಿಂದ ಇರುತ್ತಾನೆ. ಅನಂತರ ತನ್ನ ತಂದೆ-ತಾಯಿಯ ಮೇಲಿನ ಪ್ರೀತಿಯಿಂದಲೋ, ಅಥವಾ ಅಲ್ಲಿನ ಪ್ರಕೃತಿಸೌಂದರ್ಯದಿಂದಲೊ, ಲೋಕರೂಢಿಯಿಂದಲೋ, ಯಾವುದೋ ಒಂದು ರೀತಿಯಲ್ಲಿ, "ತನ್ನ ಊರು"

ಎಂಬ ಮಮತೆ, ಹೆಮ್ಮೆ ಹುಟ್ಟಿ, ತನ್ನ ಊರಿನ ಕಡೆಗೆ ಮನಸ್ಸು ಸೆಳೆಯುತ್ತದೆ. ಇದು ಬೇರೆ ಊರಿನಿಂದ ಬಂದಿರುವ ನನ್ನಂತಹ ವಿದ್ಯಾರ್ಥಿಗಳಿಗೂ, ಇತರರಿಗೂ ಮನದಟ್ಟಾದ ವಿಚಾರ.

ಈಗ ನನ್ನ ಮನಸ್ಸೂ ಸಹ ಯಾವಾಗ ರಜ ಬರುತ್ತೆ, ಊರಿಗೆ ಯಾವಾಗ ಹೋಗುವುದು ಎಂದು ಹಾತೊರೆಯುತ್ತಿದೆ. ಪ್ರತಿದಿನ ಕ್ಯಾಲೆಂಡರ್ ನೋಡು ವುದೇ ನನಗೆ ಕಸುಬಾಗಿದೆ. ಕಾರಣ, ಊರಿನ ಮೇಲೆ ಯಾವುದೋ ರೀತಿಯಾದ ಪ್ರೀತಿ. ಪ್ರೀತಿ ಮಾತ್ರ ಯಾವ ಬಗೆಯದೆಂದು ಹೇಳಲು ತುಂಬಾ ಕಷ್ಟ.

—**ಟಿ. ಎ. ಸೀತಾರಾಮ್**
(Pu.C.,P.)

---

# ನನ್ನ ಮೆಚ್ಚುಗೆಯ ಮೂರು ಪದ್ಯಗಳು

**ಕೃಷ್ಣಸಂಧಾನ–೬೭, ೬೮, ೬೯,**

ಈ ಮೂರು ಪದ್ಯಗಳು ಮುಖ್ಯವಾಗಿ ಗಾಂಧಾರಿಯ ಮತ್ತು ಧೃತರಾಷ್ಟ್ರನ ಗುಣವನ್ನು ಹೇಳುವ ಪದ್ಯಗಳಾಗಿವೆ. ಶ್ರೀ ಕೃಷ್ಣನು ಹೇಳಿದ ಬುದ್ಧಿ ಮಾತು ಗಳಿಂದ ದುರ್ಯೋಧನನು ಕೋಪಗೊಂಡು ಕೃಷ್ಣನನ್ನು ಕಟ್ಟಲು ಪ್ರಯತ್ನಿಸು ವಾಗ ಗಾಂಧಾರಿ ತನ್ನ ಮಗನ ವಿಷಯದಲ್ಲಿ ಆಡಿದ ಮಾತುಗಳು ಅಮರವಾಣಿ ಯಾಗಿದೆ. ಸಾಮಾನ್ಯವಾಗಿ ತಾಯಿಯಾದವಳಿಗೆ ತನ್ನ ಮಗನು ಕುರೂಪಿ ಯಾದರೂ ಕುರುಡನಾದರೂ ಕುಂಟನಾದರೂ ಮುದ್ದೇ. ತನ್ನ ಮಗನು ಏನು ಮಾಡಿದರೂ ಸಹ ಅದನ್ನು ಹೊರಗೆ ಹೇಳುವುದಿಲ್ಲ. ತನ್ನ ಮಗನು ಮಾಡಿದ್ದೇ ಸರಿಯೆಂದು ತಿಳಿಯುವುದು ತಾಯಿಯ ಸ್ವಭಾವ. ಆದರೆ ಇಲ್ಲಿ ಗಾಂಧಾರಿ ಆ ಪಂಗಡಕ್ಕೆ ಸೇರಿದ ಸಾಮಾನ್ಯ ಸ್ತ್ರೀ ಅಲ್ಲವೆಂಬುದು ತುಂಬಾ ಚೆನ್ನಾಗಿ ವ್ಯಕ್ತ ವಾಗುತ್ತದೆ.

ಮಗನ ನಡತೆಯನ್ನು ನೋಡಲೆಂದು ಧೃತರಾಷ್ಟ್ರನು ಗಾಂಧಾರಿಯನ್ನು ಸಭೆಗೆ ಕರೆಯಿಸಿದನು. ಆಗ ಗಾಂಧಾರಿ ಬಂದು, ತನ್ನ ಮಗನನ್ನು ಕುರಿತು,

“ಎಲೈ ಮಗನೆ, ಕೃಷ್ಣನನ್ನು ಕಟ್ಟುತ್ತೀಯ ? ದಿಟ, ಮಗನೆ, ಹೆತ್ತ ತಾಯಿಗೆ ಕೀರ್ತಿಯನ್ನು ತಂದೆ” ಎಂದಳು.

ಅನಂತರ ತನ್ನ ಮಗನು ಮಾಡಿದ ದುಷ್ಟ ಕೃತಿಯಿಂದ ನೊಂದವಳಾಗಿ ತನ್ನ ಪತಿಯನ್ನೇ ನಿಂದಿಸುತ್ತಾಳೆ. “ಎಲೈ ಧೃತರಾಷ್ಟ್ರ ಮಹಾರಾಜನೇ, ನೀನು ಇಟ್ಟ ಬೆಂಕಿ ಇದು. ಈ ಪಾಪಿ ಮಗನು ಹುಟ್ಟಿದಾಗಲೆ ಬಿಸುಡ ಹೇಳಿದೆ. ಈ ನೀಚನು ಕೃಷ್ಣನನ್ನು ಕಟ್ಟುವನೆ, ಆಕಾಶವನ್ನು ಮುಟ್ಟುವನೆ ? ಅವನ ಕೆಚ್ಚೆದೆಗೆ ಒಪ್ಪಿದೆ” ಎಂದು ಅಸಮಾಧಾನದಿಂದ ಹೇಳುತ್ತಾಳೆ.

ಧೃತರಾಷ್ಟ್ರನೂ ಸಹ ಕೊನೆಗೆ ಬುದ್ಧಿವಾದವನ್ನು ಹೇಳುತ್ತಾನೆ : “ಮಗನೇ, ಬೇಡ. ಕೃಷ್ಣನನ್ನು ಕೆಣಕಿ ನಾವು ಬದುಕಲಾರೆವು. ಯಾದವರು ನಮಗೆ ದೂರದವರಲ್ಲ. ವಸುದೇವನಿಗೂ ನನಗೂ ಬೇಧವಿಲ್ಲ. ಕೆಟ್ಟವರ ಜೊತೆ ಸೇರಿಕೊಂಡು ಈ ರೀತಿ ನಡೆದರೆ ನರಕ ತಪ್ಪಿದ್ದಲ್ಲ” ಎನ್ನುತ್ತಾನೆ.

ಹಿಂದೆ ನಮ್ಮ ದೇಶದಲ್ಲಿ ಇಂತಹ ಅನೇಕ ವ್ಯಕ್ತಿಗಳು ಇದ್ದುದರಿಂದಲೇ ನಮ್ಮ ಭಾರತ ದೇಶವು ಎಲ್ಲೆಡೆಯಲ್ಲಿಯೂ ತನ್ನದೇ ಆದ ಹಿರಿಮೆ, ಕೀರ್ತಿ, ಧರ್ಮಗಳ ಬಾವುಟವನ್ನು ಹಿಡಿದು ಶಿಖರವನ್ನು ಹತ್ತಿ ಮೆರೆದದ್ದು. ಈಗಲೂ ಸಹ ಗಾಂಧಾರಿ ಮೊದಲಾದ ಆದರ್ಶ ಮಹಿಳೆಯರಂತಹ ಸ್ತ್ರೀಯರನ್ನು ನಮ್ಮ ಭಾರತಮಾತೆ ಪಡೆದದ್ದೇ ಆದರೆ, ನಮ್ಮ ಭಾರತ ಇಂದೂ ಕೀರ್ತಿಗಳಿಸುವುದರಲ್ಲಿ ಸಂದೇಹವಿಲ್ಲ.

**—ಎಸ್. ಮುನಿಯಪ್ಪ**
(Pu.C.,N.)

---

೨

## ಸೀತಾಹರಣಂ

## (೩೨, ೨೩, ೧೦)

(೧) ಸೀತೆಯ ಧ್ವನಿ ಬಹಳ ಇಂಪಾದದ್ದು ; ಅದು ಮದಿಸಿದ ಕೋಗಿಲೆಯ ಸ್ವರದ ಹಾಗೆ ಇದ್ದಿತು. ಆಕೆಯ ಕಣ್ಣಿನೋಟ ಕನ್ನೈದಿಲೆಯಂತೆ. ನೀಲ ವರ್ಣದ ಕೂದಲು ದುಂಬಿಯ ಸಾಲಿನಂತೆ. ಆಕೆಯ ಕೂದಲ ರಾಶಿ ನವಿಲು ಗರಿಯಂತೆ. ಅವಳ ನಡಗೆಯು ಹೆಣ್ಣು ಹಂಸದ ನಡಗೆಗೆಣೆ. ಅಂಗೈ ಅಂಗಾಲುಗಳು ಚಿಗುರುಗಳ ಹಾಗೆ ಕೆಂಪು. ಆಕೆಯ ಮುಖವು ಕಮಲ ಪುಷ್ಪದ ಹಾಗೆ. ಆಕೆಯ ತೋಳು ಬಳ್ಳಿಗಳ ಹಾಗೆ ಕೋಮಲ.

ಹೀಗೆ ರಾಮನು ಸೀತೆಯನ್ನು ವರ್ಣನೆ ಮಾಡುತ್ತಾ, ಆಕೆಯನ್ನು ಕರೆದು ಕೂಗುತ್ತ, ತನಗೆ ಕಾಣಿಸದೆ ಬೇರೆ ಬೇರೆ ಸುಂದರ ವಸ್ತುಗಳಲ್ಲಿ ಅಡಗಿ ಕಾಡಿದ ಕಾರಣವೇನು ಎಂದು ದುಃಖಿಸುತ್ತಾನೆ.

(೨) ರಾವಣನು ಸೀತೆಯನ್ನು ಅಪಹರಿಸಿಕೊಂಡು ಹೋಗುತ್ತಿರುವ ದೃಶ್ಯವನ್ನು ನೋಡಿ ಜಟಾಯುವಿಗೆ ಅತ್ಯಂತ ಕೋಪವುಂಟಾಯಿತು. ಆಗ ಜಟಾಯುವು ತನ್ನ ತೀಕ್ಷ್ಣವಾದ ಉಗುರುಗಳಿಂದಲೂ ಹರಿತವಾದ ಕೊಕ್ಕಿನಿಂದಲೂ ರಾವಣನನ್ನು ತಿವಿಯಲು ಬಂದಾಗ, ಪ್ರಯಾಣದಲ್ಲಿ ಮಗ್ನನಾಗಿ ಆತುರದಿಂದಿದ್ದ ರಾವಣನು ನಸುನಕ್ಕು ತನ್ನ ಕೈಯಿಂದ ಹೊಡೆದನು. ಆಗ, ಹಿಂದೆ ದೇವೇಂದ್ರನು ತನ್ನ ವಜ್ರಾಯುಧದಿಂದ, ಹಾರುತ್ತಿದ್ದ ಬೆಟ್ಟಗಳಿಗೆ ಹೊಡೆದಾಗ ಅವು ರೆಕ್ಕೆ ಮುರಿದು ಆಕಾಶದಿಂದ ಹೇಗೆ ಭೂಮಿಗೆ ಬೀಳುತ್ತಿದ್ದವೋ ಹಾಗೆ ಜಟಾಯುವಿನ ಎರಡು ರೆಕ್ಕೆಗಳೂ ಕತ್ತರಿಸಿಹೋಗಿ ಅದು ಗಗನದಿಂದ ಭೂಮಿಗೆ ಬಿದ್ದಿತು ಎಂಬುದಾಗಿ ಕವಿಯು ಜಟಾಯುವಿನ ಹೋರಾಟವನ್ನು ಅದರ ದುರಂತ ಮರಣವನ್ನೂ ಮನೋಜ್ಞವಾಗಿ ವರ್ಣಿಸಿರುವನು.

**—ಬಿ. ಆರ್. ಚಂದ್ರಶೇಖರ**
**(Pu.C.,L.)**

———